ಉಪನ್ಯಾಸ ಗ್ರಂಥಮಾಲೆ

೨೦

# ಪ್ರಾಚೀನ ಭಾರತದಲ್ಲಿ ಸಾಮಾಜಿಕ ಜನಜೀವನ

ಸಿ. ವ್ಹಿ. ರಂಗಸ್ವಾಮಿ, ಎಂ.ಎ.




ಕರ್ನಾಟಕ ವಿಶ್ವವಿದ್ಯಾಲಯ

ಧಾರವಾಡ

ಮೇ, ೧೯೬೮

# ಉಪನ್ಯಾಸ ಗ್ರಂಥಮಾಲೆ

೧. ಭವಭೂತಿ (ದ್ವಿತೀಯ ಆವೃತ್ತಿ) –ಕೆ. ಕೃಷ್ಣಮೂರ್ತಿ
೨. ಮನೋರೋಗಗಳು ( ,, ) –ಎನ್. ಆರ್. ಕುಲಕರ್ಣಿ
೩. ಪ್ರಥಮ ಪಂಚವಾರ್ಷಿಕ ಯೋಜನೆ
 ಹಾಗೂ ಒಕ್ಕಲುತನ –ಎನ್. ಪಿ. ಪಾಟೀಲ
೪. ಗಾದೆಗಳು (ತೃತೀಯ ಆವೃತ್ತಿ) –ಎ. ಕೆ. ರಾಮಾನುಜನ್
೫. ಭಾರತದಲ್ಲಿ ಜಾತಿ ಪದ್ಧತಿ (ದ್ವಿ. ಆ.)–ವ್ಹಿ. ಎಸ್. ಡಿ'ಸೋಜಾ
೬. ಕೀಟಕ ಪಿಡುಗುಗಳ ಸಮೀಕ್ಷಣೆ (ದ್ವಿ. ಆ.)
 –ಎಸ್. ಎಸ್. ಕಟಗಿಹಳ್ಳಿಮಠ
೭. ರಾಜಕೀಯ ಪಕ್ಷಗಳು(ದ್ವಿ. ಆ.)-ಎನ್. ರಾಜಗೋಪಾಲರಾವ್
೮. ಸ್ವಾದಿ ಅರಸುಮನೆತನ ( ,, )–ಎಸ್. ಎಸ್. ಮಾಳವಾಡ
೯. ಮಕ್ಕಳ ಶಿಕ್ಷಣ (ತೃ. ಆ.) –ಡಿ. ಎಸ್. ಕರ್ಕಿ
೧೦. ಮೂಢ ನಂಬಿಕೆಗಳು ( ,, ) –ಎಲ್. ಆರ್. ಹೆಗಡೆ
೧೧. ಸಂಸ್ಕೃತ ಕವಯಿತ್ರಿಯರು (ದ್ವಿ. ಆ.)–ಕೆ. ಟಿ. ಪಾಂಡುರಂಗಿ
೧೨. ನಿತ್ಯಜೀವನದಲ್ಲಿ ರಸಾಯನಶಾಸ್ತ್ರ (,,) –ಬಿ. ವಿರೂಪಾಕ್ಷಪ್ಪ
೧೩. ಸಾರ್ವಜನಿಕ ಆಡಳಿತ (ದ್ವಿ. ಆ.) –ಜಿ. ಎಸ್. ಹಾಲಪ್ಪ
೧೪. ವಿಚಾರವಾದ ( ,, ) –ಗೌರೀಶ ಕೈಕಿಣಿ
೧೫. ಮಹಾಕವಿ ಮಿಲ್ಟನ್ ( ,, ) –ಜಿ. ಎಸ್. ಆಮೂರ
೧೬. ಭಾರತದಲ್ಲಿ ಗ್ರಂಥಾಲಯ ಪ್ರಸಾರ(,,)–ಕೆ. ಎಸ್. ದೇಶಪಾಂಡೆ
೧೭. ಭಾರತೀಯ ನಾಗರಿಕತೆಗೆ ಮುಸುಮಿನ
 ಕೊಡುಗೆ (ದ್ವಿ. ಆ.) –ಬಿ. ಎಚ್. ಶ್ರೀಧರ
೧೮. ಜನಸಂಖ್ಯೆ ಹಾಗು ಆಹಾರ ಸಮಸ್ಯೆ
 –ಪಿ. ಎಂ. ಉಮಾಕಾಂತಶಾಸ್ತ್ರಿ
೧೯. ಸೌರವ್ಯೂಹ –ಸಿ. ಎನ್. ಶ್ರೀನಿವಾಸ ಅಯ್ಯಂಗಾರ
೨೦. ಪ್ರಾಚೀನ ಭಾರತದಲ್ಲಿ ಸಾಮಾಜಿಕ ಜನಜೀವನ (ದ್ವಿ. ಆ.)
 –ಸಿ. ವ್ಹಿ. ರಂಗಸ್ವಾಮಿ
೨೧. ಸಮಾಜ ಕಾರ್ಯ(ದ್ವಿ. ಆ.)–ಎಚ್. ಎಂ. ಮರುಳಸಿದ್ಧಯ್ಯ
೨೨. ಸಂಸತ್ತಿನ ಕಾರ್ಯಪದ್ಧತಿ (,,)–ಎ. ಎಂ. ರಾಜಶೇಖರಯ್ಯ
೨೩. ಕನ್ನಡನಾಡಿನ ಶಾಸನಗಳು (ದ್ವಿ. ಆ.) –ಪಿ. ಬಿ. ದೇಸಾಯಿ
೨೪. ಕವೀಂದ್ರ ರವೀಂದ್ರರು ( ,, ) –ಎಸ್. ಎಸ್. ಮಾಳವಾಡ
೨೫. ನಾಗಾನಂದ ( ,, ) –ಎಚ್. ಪಿ. ಮಲ್ಲೇದೇವರು

ಉಪನ್ಯಾಸ ಗ್ರಂಥಮಾಲೆ

೨೦

# ಪ್ರಾಚೀನ ಭಾರತದಲ್ಲಿ ಸಾಮಾಜಿಕ ಜನಜೀವನ

ಸಿ. ವ್ಹಿ. ರಂಗಸ್ವಾಮಿ



ಕರ್ನಾಟಕ ವಿಶ್ವವಿದ್ಯಾಲಯ

ಧಾರವಾಡ

ಮೇ, ೧೯೬೮

ಪ್ರಕಾಶಕರು :

ಎಸ್. ಎಸ್. ಒಡೆಯರ, ಎಂ.ಎ., ಎಲ್‌ಎಲ್. ಬಿ

ರಜಿಸ್ಟ್ರಾರ

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಪ್ರಥಮ ಮುದ್ರಣ, ೧೯೬೦
೨,೦೦೦ ಪ್ರತಿಗಳು

ಪರಿಷ್ಕೃತ ದ್ವಿತೀಯ ಮುದ್ರಣ, ೧೯೬೮
೩,೦೦೦ ಪ್ರತಿಗಳು

ಬೆಲೆ : ೨೫ ಪೈಸೆ

ಮುದ್ರಕರು :

ಸಂಗಮ ಮುದ್ರಣಾಲಯ,

ಸಾಧನಕೇರಿ, ಧಾರವಾಡ-೧.

# ಮುನ್ನುಡಿ

ನಮ್ಮ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ವಿಭಾಗವು ಗ್ರಾಮಾಂತರ ಪ್ರದೇಶಗಳಲ್ಲಿ ಪ್ರತಿ ತಿಂಗಳು ಏರ್ಪಡಿಸುತ್ತಿರುವ ಉಪನ್ಯಾಸ ಶಿಬಿರಗಳು ದಿನೇ ದಿನೇ ಜನಪ್ರಿಯವಾಗುತ್ತ ಸಾಗಿರುವುದು ನಿಜವಾಗಿಯೂ ಸಂತೋಷದ ಸಂಗತಿ. ಈ ಜ್ಞಾನಪ್ರಸಾರದ ಕಾರ್ಯದಲ್ಲಿ ಭಾಗವಹಿಸುವುದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕವೊದಗುವುದಲ್ಲದೆ ಎಂಥ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭವಾದ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವುದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೆ ಎಪ್ಪತ್ಮೂರು ಪುಸ್ತಕಗಳು ಪ್ರಕಟವಾಗಿವೆ. ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕಗಳು ಎರಡು-ಮೂರು ಮುದ್ರಣಗಳನ್ನೂ ಕಂಡಿ

ರುವುದು ಈ ಮಾಲೆಯ ಉಪಯುಕ್ತತೆಯನ್ನೂ ಜನಪ್ರಿಯತೆ ಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಧನ ಸಹಾಯ ಆಯೋಗದವರು ಉಪನ್ಯಾಸ ಶಿಬಿರಗಳಿಗೂ, ಈ ಪುಸ್ತಿಕೆಗಳ ಪ್ರಕಟನೆಗೂ ನೆರವು ನೀಡುತ್ತಿದ್ದು ಅವರಿಗೆ ವಿಶ್ವವಿದ್ಯಾಲಯವು ತನ್ನ ಕೃತಜ್ಞತೆ ಗಳನ್ನು ಸೂಚಿಸುತ್ತದೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋ ಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖವಾದ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಎ. ಎಸ್. ಅಡಕೆ
ಉಪಕುಲಪತಿ
ಕರ್ನಾಟಕ ವಿಶ್ವವಿದ್ಯಾಲಯ

ಧಾರವಾಡ
೨೦–೪–೧೯೬೮

# ಬಿನ್ನಹ

ಪ್ರಾಚೀನ ಭಾರತದ ಸಾಮಾಜಿಕ ಜೀವನ, ವ್ಯವಸ್ಥೆ, ಪದ್ಧತಿಗಳಲ್ಲಿ ಕೆಲವು ಹೆಚ್ಚಿನ ಟೀಕೆಗೊಳಗಾಗಿವೆ. ಏಕೆಂದರೆ ಅವುಗಳ ಅರ್ಥ ವಿವರಣೆ ಮತ್ತು ಕಾರ್ಯ ಭಾಗವನ್ನು ಸಮಂಜಸವಾಗಿಯೂ, ನಿಜಸ್ವರೂಪದಲ್ಲಿಯೂ ಮತ್ತು ನ್ಯಾಯ ಸಮ್ಮತವಾಗಿಯೂ ನಾವು ತಿಳಿದುಕೊಂಡಿಲ್ಲ. ಹಿಂದಿನದೆಲ್ಲವೂ 'ಹಳೆಯದು' ಎಂದು ಬಿಡಲಾಗುವುದಿಲ್ಲ; ಹಿಂದಿನ ಪದ್ಧತಿಗಳಿಗೂ ಈಗಿನ ಪದ್ಧತಿಗಳಿಗೂ ನಿಕಟ ಸಂಬಂಧ ಇದ್ದೇ ಇರುತ್ತದೆ. ಆದ್ದರಿಂದ ಉತ್ಕೃಷ್ಟವೆಂದು ಕಂಡುಬಂದಿರುವ ಹಿಂದಿನ ಪದ್ಧತಿಗಳನ್ನು ಆಧುನಿಕ ಸೌಕರ್ಯಗಳೊಡನೆ ಕೂಡಿಸಿಕೊಂಡು ಸಮಾಜ ವ್ಯವಸ್ಥೆ ಏರ್ಪಟ್ಟರೆ, ಏಳಿಗೆ, ಅಭಿವೃದ್ಧಿ, ಐಕಮತ್ಯಗಳು ಸ್ಥಿರಪಟ್ಟು, ಅಭ್ಯುದಯದ ಹಾದಿಯಲ್ಲಿ ಮುಂದೆ ಹೋಗಲು ಅವಕಾಶ-ವುಂಟಾಗುತ್ತದೆ. ಈ ಕಾರ್ಯದಲ್ಲಿ ಪ್ರಾಚೀನ ಭಾರತದ ಸಾಮಾಜಿಕ ಜನಜೀವನದ ಮುಖ್ಯ ಲಕ್ಷಣಗಳನ್ನು ತಿಳಿಸಿ ವಾಚಕರಲ್ಲಿ ಮತ್ತೂ ಹೆಚ್ಚಿನ ವಿವರಣೆಯನ್ನು ತಿಳಿಯಲು ಕುತೂಹಲವನ್ನುಂಟುಮಾಡಬೇಕೆಂದು ನನ್ನ ಆಸೆ. ಈ ಉದ್ದೇಶ ಎಷ್ಟರಮಟ್ಟಿಗೆ ಸಾಧ್ಯವಾಗುತ್ತದೆಯೋ ಅಷ್ಟರ

ಮಟ್ಟಿಗೆ ಈ ಕಿರುಹೊತ್ತಿಗೆಯನ್ನು ಬರೆಯುವಲ್ಲಿಯ ನನ್ನ ಪ್ರಯತ್ನ ಸಾರ್ಥಕವೆನಿಸಿದಂತೆ.

ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ಸಮಿತಿಯ ಅಂಗವಾಗಿ ಹುಮನಾಬಾದದಲ್ಲಿ (ಬೀದರ) ೧೯೬೦ನೆಯ ಫೆಬ್ರುವರಿ ತಿಂಗಳಲ್ಲಿ ಜರುಗಿದ ಉಪನ್ಯಾಸ ಶಿಬಿರದಲ್ಲಿ ಮಾಡಿದ ನನ್ನ ಭಾಷಣವನ್ನು ಈ ಕಿರುಹೊತ್ತಿಗೆಯ ರೂಪದಲ್ಲಿ ಪ್ರಕಟಿಸಲಾಗಿದೆ. ಪ್ರಕಟನೆಯ ಮುನ್ನ ನನ್ನ ಹಸ್ತಪ್ರತಿಯನ್ನು ಓದಿ ಸೂಕ್ತ ಸಲಹೆಗಳನ್ನು ಕೊಟ್ಟು ಉಪಕರಿಸಿದ ಪ್ರಕಟನಾ ಶಾಖೆಯ ನಿರ್ದೇಶಕರಾದ ಶ್ರೀಮಾನ್ ಸಿ. ಎಸ್. ಕಣವಿಯವರಿಗೆ ನಾನು ಚಿರಋಣಿ.

ಇಂಥ ಒಂದು ಸದವಕಾಶವನ್ನು ಕಲ್ಪಿಸಿಕೊಟ್ಟ ಕರ್ನಾಟಕ ವಿಶ್ವವಿದ್ಯಾಲಯದ ಅಧಿಕಾರವರ್ಗದವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ಯಾದಗಿರಿ
೨೬-೮-೧೯೬೦ ಸಿ. ವ್ಹಿ. ರಂಗಸ್ವಾಮಿ

# ದ್ವಿತೀಯ ಮುದ್ರಣ

ಈ ಕಿರುಹೊತ್ತಿಗೆಯ ದ್ವಿತೀಯ ಆವೃತ್ತಿಯನ್ನು ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯವು ಪ್ರಕಟಿಸಿರುವುದಕ್ಕಾಗಿ ವಿಶ್ವವಿದ್ಯಾಲಯದ ಅಧಿಕಾರ ವರ್ಗದವರಿಗೆ ನಾನು ಪುನಃ ನನ್ನ ಕೃತಜ್ಞತಾ ವಂದನೆಗಳನ್ನು ಸಲ್ಲಿಸುತ್ತೇನೆ.

ಹುಬ್ಬಳ್ಳಿ<br>
೧–೩–೧೯೬೮

ಸಿ. ವ್ಹಿ. ರಂಗಸ್ವಾಮಿ<br>
ಶ್ರೀ ಕಾಡಸಿದ್ಧೇಶ್ವರ ಕಾಲೇಜ

# ಪರಿವಿಡಿ

॥ ಶ್ರೀ ॥

" ಧರ್ಮಶ್ರೇಯಸ್ಸಮುದ್ದಿಷ್ಟಂ ಶ್ರೇಯೋಭ್ಯುದಯ ಲಕ್ಷಣಂ ।
ಸತು ಪಂಚ ವಿಧಃ ಪ್ರೋಕ್ತೋ ವೇದಮೂಲಸ್ಸನಾತನಃ ॥
ಅಸ್ಯಸಮ್ಯಗನುಷ್ಠಾನಾ ತ್ಸ್ವರ್ಗೋ ಮೋಕ್ಷಶ್ಚ ಜಾಯತೇ ।
ಇಹಲೋಕೇ ಸುಖೈಶ್ವರ್ಯಮತುಲಂ ಚ ಖಗೇಶ್ವರ ॥ "

— ಭವಿಷ್ಯ ಪುರಾಣ

# ಪ್ರಾಚೀನ ಭಾರತದಲ್ಲಿ ಸಾಮಾಜಿಕ ಜನಜೀವನ

## ೧. ಪೀಠಿಕೆ

ಡಾ॥ ಆರ್ನಾಲ್ಡ್ ಟಾಯನ್‌ಬೀಯವರು ಜಗದ್ವಿಖ್ಯಾತರಾದ ಇತಿಹಾಸಕಾರರು. ಅವರು ಇತಿಹಾಸದ ಮುಖ್ಯ ಕಾರ್ಯಭಾರವನ್ನು ಈ ರೀತಿ ಸೂಚಿಸಿರುವರು: ಮಾನವನ ಸಂಬಂಧಗಳೇರ್ಪಟ್ಟಿದ್ದ ಆಧಾರಗಳನ್ನು ಇತಿಹಾಸವು ಅರಸರ ಮತ್ತು ಯುದ್ಧಗಳ ವರ್ಣನೆಯಲ್ಲಿ ವಿವರಿಸಬೇಕು; ಮತ್ತು ಇತಿಹಾಸವನ್ನು ಓದುವುದು ಮಾನವೀಯತೆಯ ದೃಷ್ಟಿಯಿಂದ; ನಾವು ವಿಜ್ಞಾನಿಗಳಾಗಿರಬಹುದು, ನುರಿತ ಯಾಂತ್ರಿಕರಾಗಿರಬಹುದು; ಆದರೆ ಪ್ರಥಮದಲ್ಲಿ ನಾವೆಲ್ಲರೂ ಮಾನವರು. ಆದ್ದರಿಂದ ಮಾನವನ ಸಾಮೂಹಿಕ ಜೀವನದ ಅರಿವು ನಮಗಾಗಬೇಕು. ಈ ವೈಜ್ಞಾನಿಕ ಯುಗದಲ್ಲಿ ವಿಜ್ಞಾನ ಸಂಶೋಧನೆಗಳು ನಮ್ಮ ಕೈಮೀರಿ ಉಪಯೋಗಿಸಲ್ಪಡುತ್ತಿರುವ ಕಾಲದಲ್ಲಿ ಸಮಾಜ ಉಳಿದು ಮುನ್ನಡೆಯ ಹಾದಿಯಲ್ಲಿ

ಕಾಲಿಡಬೇಕಾದರೆ ಸಾಮಾಜಿಕ ಜೀವನ ಸುವ್ಯವಸ್ಥಿತವಾಗಿ ಏರ್ಪಡಬೇಕು. ಈ ಕಾರ್ಯಸಾಧನೆಗೆ ಸಮಾಜದಲ್ಲಿ ನಡೆದು ಬಂದಿರುವ ಶಾಶ್ವತವಾದ ಉತ್ಕೃಷ್ಟ ಪದ್ಧತಿಗಳು, ಸಂಘಗಳು–ಇತ್ಯಾದಿಗೆ ಬೆಲೆ ಕೊಟ್ಟು ಪುನಃ ಆಚರಣೆಗೆ ತಂದರೆ ಮಾನವೀಯತೆಯು ಬೆಳೆದು ವಿಜ್ಞಾನದ ದುರುಪಯೋಗದಿಂದ ಆಗಬಹುದಾದ ಅನರ್ಥಗಳು ಬಹುಮಟ್ಟಿಗೆ ಕಡಮೆಯಾಗುತ್ತವೆ.

ಅತ್ಯಾವಶ್ಯಕವಾಗಿ ವೃದ್ಧಿಯಾಗಬೇಕಾಗಿರುವ ಮಾನವೀ-ಯತೆ ಮತ್ತು ಸಮಾಜದಲ್ಲಿ ಸಹನಪೂರ್ವಕವಾದ ನಿಯಂತ್ರಣ ಪ್ರಾಚೀನ ಭಾರತದ ಸಮಾಜದಲ್ಲಿದ್ದವು. ಮಾನವನ ಅಂತಃಕರಣ ಶುದ್ಧಿಯಿಂದ ಅವನ ಬಾಹ್ಯ ವ್ಯವಹಾರಗಳನ್ನು ನಿಯಂತ್ರಿಸುವುದೇ ಉದ್ದೇಶವಾಗಿತ್ತು. ಗಣತಂತ್ರ ರಾಜ್ಯಗಳಲ್ಲಿ ಮಾನವನು ಜೀವಿಸಿ ಸರ್ವತೋಮುಖವಾದ ಅಭಿವೃದ್ಧಿ ಹೊಂದಲು ಅಗತ್ಯವೆನಿಸಿರುವ ಮೂಲಭೂತ ಹಕ್ಕುಗಳನ್ನು ಅವುಗಳ ಅರಿವಿಲ್ಲದಂತೆಯೇ ಆಚರಿಸಿ ಅವುಗಳಿಂದುಂಟಾಗುವ ಫಲಗಳನ್ನನು-ಭವಿಸುತ್ತಿದ್ದರು. ಸ್ವತಂತ್ರ ಜೀವನ, ವಿಚಾರಪೂರಿತಜೀವನ ಹಾಗೂ ಪರಸ್ಪರ ವಿಚಾರಗಳಿಗೆ ಮನ್ನಣೆ - ಇವುಗಳನ್ನು ನಮ್ಮ ಪೂರ್ವಿಕರು ಅನುಸರಿಸುತ್ತಿದ್ದರು.

ಆದರೆ ಪ್ರಾಚೀನ ಕಾಲದ ಪದ್ಧತಿಗಳೆಲ್ಲವೂ ಹಿತವಾದವು. ಅವುಗಳನ್ನೆಲ್ಲಾ ಮತ್ತೆ ಆಚರಣೆಗೆ ತರಬೇಕೆಂಬ ಸಂಪ್ರದಾಯವಾದ ನನ್ನದಲ್ಲ. ಅಥವಾ ಈಗಿನ ಸಾಮಾಜಿಕ ಪದ್ಧತಿ

ಗಳೆಲ್ಲವೂ ದುಷ್ಪರಿಣಾಮಕಾರಿಯೆಂದೂ ಹೇಳುವುದಿಲ್ಲ. ಪ್ರಾಚೀನ ಕಾಲದಿಂದಲೂ ಜನರ ಅನುಭವಕ್ಕೆ ಉತ್ಕೃಷ್ಟ ವೆಂದು ಕಂಡುಬರುವ ತತ್ವಗಳು ಮತ್ತು ಪದ್ಧತಿಗಳಿಗೆ ಆಧುನಿಕ ಕಾಲದ ಸೌಕರ್ಯಗಳನ್ನು ಕೂಡಿಸಿಕೊಂಡು ನಡೆ ದರೆ ಸಾಮಾಜಿಕ ಜೀವನ ಉತ್ತಮವಾಗುವುದಲ್ಲದೆ ಸ್ಥಿರವಾಗಿ ಏರ್ಪಡುತ್ತದೆ.

ಪ್ರಾಚೀನ ಭಾರತದ ಸಾಮಾಜಿಕ ಜನಜೀವನವನ್ನು ತಿಳಿದುಕೊಳ್ಳಲು ಆಗಿನ ಕಾಲದ ಗ್ರಂಥಗಳು, ಶಾಸನಗಳು, ತಾಮ್ರಪಟಗಳು, ನಾಣ್ಯಗಳು, ಪರದೇಶದವರ ಬರವಣಿಗೆಗಳು ಅನುಕೂಲ ಮಾಡಿಕೊಡುತ್ತವೆ. ಭಾರತೀಯ ಪ್ರಾಚೀನ ಗ್ರಂಥಗಳೆನಿಸಿರುವ ಮಹಾಕಾವ್ಯಗಳಾದ ರಾಮಾಯಣ, ಮಹಾಭಾರತ ಹಾಗೂ ಸೂತ್ರಗಳು (ಗೃಹ್ಯಸೂತ್ರ, ಧರ್ಮ ಸೂತ್ರ ಅಥವಾ ಸ್ಮೃತಿಗಳು) ಅರ್ಥಶಾಸ್ತ್ರ, ಕಾಮಶಾಸ್ತ್ರ ಇವು ಹೆಚ್ಚಿನ ವಿಷಯವನ್ನು ತಿಳಿಸುವುವು.

ಈ ಗ್ರಂಥಗಳಿಂದ ತಿಳಿದುಬರುವ ಮುಖ್ಯ ಅಂಶ ಗಳೆಂದರೆ - ಜೀವನವು ಧರ್ಮಮಯವಾಗಿತ್ತು; ಧರ್ಮವು ಶಾಶ್ವತವಾದ ತತ್ವಗಳನ್ನವಲಂಬಿಸಿತ್ತು; ಈ ಧರ್ಮವು ಅನೇಕ ಗೊಂದಲಗಳಿಗೆ ಸಿಕ್ಕಿಕೊಂಡರೂ ಉಳಿದು ಊರ್ಜಿತ ವಾಗಿದೆ. ಏಕೆಂದರೆ ಇದು ವಿಭೂತಿಮತ್ತಾದುದು ಮತ್ತು ಪ್ರವರ್ಧಮಾನವಾಗುತ್ತಿರುವ ಧರ್ಮವು. (ಇಲ್ಲಿ 'ಧರ್ಮ' ಎಂಬ ಪದಕ್ಕೆ ಅರ್ಥ ಧೃತಿ, ನಿಷ್ಠೆ, ಕರ್ತವ್ಯಪಾಲನೆ ಮತ್ತು ಕ್ರಮಜೀವನ, 'ಮತ' ಎಂದಲ್ಲ.)

ಸಾಮಾಜಿಕ ಜನಜೀವನವು ಭಾರತೀಯ ಸಂಸ್ಕೃತಿಯ ಒಂದು ಅಂಗ. ಭಾರತೀಯ ಸಂಸ್ಕೃತಿಯು ಹಿರಿದಾದದ್ದು; ಮತ್ತು ಸಾಮಾಜಿಕ ವಿಚಾರಗಳಲ್ಲಿಯೂ ಕೂಡ ಹೇಳ ಬೇಕಾಗಿರುವ ವಿಚಾರಗಳು ಹೇರಳವಾಗಿವೆ; ಎಲ್ಲವನ್ನೂ ಇಲ್ಲಿ ವಿವರವಾಗಿ ಹೇಳಲು ಅವಕಾಶವಿಲ್ಲ. ಶಿಲಾ ಯುಗ, ಸಿಂಧೂನದಿ – ನಾಗರಿಕತೆ, ವೇದಗಳ, ಮೌರ್ಯರ, ಗುಪ್ತರ, ಹರ್ಷನ, ದಕ್ಷಿಣ ಇಂಡಿಯಾ, ಕರ್ನಾಟಕ - ಈ ಕಾಲ-ಗಳಲ್ಲಿ ಏರ್ಪಟ್ಟಿದ್ದ ಸಾಮಾಜಿಕ ವ್ಯವಸ್ಥೆಯನ್ನು ಪರಿಶಿಷ್ಟದಲ್ಲಿ ತಿಳಿಸಿದೆ. ಪ್ರಾಚೀನ ಭಾರತದ ಸಾಮಾಜಿಕ ಜೀವನದ ಒಂದು ಪಕ್ಷಿನೋಟವನ್ನು ಮಾತ್ರ ಕೊಡಲು ಪ್ರಯತ್ನಿಸಿದ್ದೇನೆ. ಈ ಪ್ರಯತ್ನದ ಫಲವಾಗಿ, ನಮ್ಮ ಹಿರಿಯರು ಎಂತಹ ಉದಾತ್ತ ಮನೋಭಾವನೆಯನ್ನು ಹೊಂದಿದ್ದರು. ಅವರು ಅನುಸರಿಸಿದ ನಿಯಮಗಳಲ್ಲಿ ಎಂತಹ ತತ್ವಗಳು ಅಡಕವಾಗಿವೆ ಎಂಬುದು ವ್ಯಕ್ತವಾದರೆ ಸಾಕು. ಜನರ ಚಟುವಟಿಕೆಗಳಿಗೆಲ್ಲಾ ಆಧಾರವೆನಿಸಿದ 'ಧರ್ಮ' ಎಂಬ ಪದವು ಈಗಂತೂ ಜುಗುಪ್ಸಾ ಸ್ಪದವಾಗಿಯೂ, ತಿರಸ್ಕೃತವಾಗಿಯೂ, ಕಾಣಬರುತ್ತದೆ; ಈ ಪದ್ಧತಿಗಳಿಗೂ ನಮಗೂ ಏನೊಂದೂ ಸಂಬಂಧವಿಲ್ಲವೆಂಬ ಮನೋಭಾವನೆ ಕಂಡುಬರುತ್ತದೆ. ಆದ್ದರಿಂದ ಈ ಕಾಲಕ್ಕೂ ಅನುಸರಿಸಬಹುದಾದ ಅಂದಿನ ತತ್ವ ಸಂಪ್ರದಾಯಗಳನ್ನೂ ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ.

# ೨. ಪ್ರಾಚೀನ ಭಾರತದ ಸಾಮಾಜಿಕ ಜನಜೀವನದ ತಿಳಿವಳಿಕೆಯು ಅಗತ್ಯ

ಭಾರತವು ಅತ್ಯಂತ ಪುರಾತನ ನಾಗರಿಕ ದೇಶಗಳಲ್ಲಿ ಒಂದೆಂದು ಪರಿಗಣಿಸಲ್ಪಟ್ಟಿದೆ. ನಮ್ಮ ಪೂರ್ವಿಕರು ಪ್ರತಿ-ಪಾದಿಸಿರುವ ವಿಚಾರಗಳು ಗಹನವೂ ಗಾಢವೂ ಆಗಿದ್ದವು. ರಾಜಕೀಯ ಗೊಂದಲಗಳಿಗೆ ಸಿಕ್ಕಿಕೊಂಡರೂ ಭಾರತದ ಸಭ್ಯತೆ ಛಿನ್ನವಿಲ್ಲದೇ ಅವಿಚ್ಛಿನ್ನವಾಗಿ ನಡೆದುಬಂದಿದೆ. ಈ ಮಾತಿಗೆ ನಮ್ಮ ಇತಿಹಾಸದ ಆಧಾರಗಳೆನಿಸಿರುವ ಗ್ರಂಥಗಳು, ಶಿಲಾಲೇಖನಗಳೇ ಸಾಕ್ಷಿ. ಆದ್ದರಿಂದ ನಮ್ಮ ಪೂರ್ವಿಕರು ಅನುಸರಿಸುತ್ತಿದ್ದ ಸಾಮಾಜಿಕ ಜನಜೀವನವನ್ನು ಪ್ರಪಂಚದ ಜನತೆಯೆದುರು ಇಂದು ಇಡಬೇಕಾಗಿದೆ. ಇದಕ್ಕೆ ಮುಖ್ಯ ಕಾರಣ ಪ್ರಾಚೀನಕಾಲದಿಂದಲೂ ಭಾರತೀ-ಯರು ಯುದ್ಧದಲ್ಲಿ ಪರಿಶ್ರಮ ಪಡೆದಿದ್ದರೂ ಆಕ್ರಮಣ ನೀತಿಯನ್ನನುಸರಿಸುತ್ತಿರಲಿಲ್ಲ; ಭಾರತದ ಪರರಾಷ್ಟ್ರ ನೀತಿ ಈ ದಿನಕ್ಕೂ ಆಕ್ರಮಣ ನೀತಿಯನ್ನನುಸರಿಸಿಲ್ಲ. ತಮ್ಮ ಸಮಾಜ ಜೀವನದಲ್ಲಿ ಮಾನವೀಯತೆ, ವಿಶಾಲಜ್ಞಾನ, ಉದಾತ್ತವಾದ ಜೀವನಪದ್ಧತಿ, ಸಹಕಾರ, ಸಹಾಯ, ಕರುಣೆ, ಭಕ್ತಿ, ಸ್ತ್ರೀಗೌರವ, ಸರಳ ಜೀವನ, ವಿನಯ ಮತ್ತು ವಿವೇಕಗಳಿಗೆ ಬೆಲೆ ಕೊಟ್ಟಿದ್ದರು.

ಇಂದು ಭಾರತೀಯ ವಿಚಾರಗಳನ್ನು ಕಲಿಸಲು ವಿದೇಶೀಯ ವಿಶ್ವವಿದ್ಯಾಲಯಗಳಲ್ಲಿ ಏರ್ಪಾಟು ಆಗುತ್ತಿದೆ. ಮೆಲ್ಬೋರ್ನ್ ಮತ್ತಿತರ ವಿಶ್ವವಿದ್ಯಾಲಯಗಳಲ್ಲಿಯೂ ಭಾರತದ ರೀತಿ, ನೀತಿ, ಮನೋದೃಷ್ಟಿಗಳನ್ನು ತಿಳಿಸಲು ಆಚಾರ್ಯಪೀಠವನ್ನು ಸ್ಥಾಪಿಸಿದ್ದಾರೆಂಬುದು ಹೆಮ್ಮೆಯ ವಿಷಯ. ಆದ್ದರಿಂದ ಭಾರತೀಯರಾದ ನಾವು ನಮ್ಮ ಪೂರ್ವಿಕರ ನಡೆ, ನುಡಿ, ಜೀವನಕ್ರಮ - ಇವುಗಳನ್ನು ತಿಳಿದುಕೊಳ್ಳುವ ಪ್ರಯತ್ನವನ್ನು ಮಾಡಲೇಬೇಕು. ಈ ಯುಗದಲ್ಲಿ - ವಿಜ್ಞಾನದ ಪ್ರಗತಿಯನ್ನೇ ಪ್ರಮುಖವಾಗಿ ಕಂಡು, ಪ್ರಾಚೀನ ವಿಷಯಗಳು ಅನುಪಯೋಗವೆಂದು ಮೂಡಿರುವ ಭಾವನೆಯನ್ನು ತ್ಯಜಿಸಬೇಕು. ಅಲ್ಲದೆ ವಿಜ್ಞಾನದಲ್ಲಿ ಎಷ್ಟೇ ಮುಂದುವರಿದಿದ್ದರೂ ಸರ್ವತೋಮುಖವಾದ ಬೆಳವಣಿಗೆಯಲ್ಲಿ ಅನೇಕ ಸಮಸ್ಯೆಗಳು ತಲೆದೋರಿವೆ. ಈ ವಿಧವಾದ ಸಮಸ್ಯೆಗಳು ಯಾವುದಾದರೊಂದು ರೂಪದಲ್ಲಿ ( ಸಣ್ಣ ಪ್ರಮಾಣದಲ್ಲೇ ಆಗಲಿ) ಪ್ರಾಚೀನ ಕಾಲದಲ್ಲಿ ತಲೆದೋರಿದ್ದವು. ಇಂತಹ ಸಮಸ್ಯೆಗಳನ್ನು ಪರಿಹರಿಸಿಕೊಂಡಿರುವ ರೀತಿ ಹೇಗಿತ್ತೆಂದು ತಿಳಿದುಕೊಂಡರೆ ಈಗಿನ ಸಮಸ್ಯೆಗಳನ್ನು ಪರಿಹಾರ ಮಾಡುವ ಕಾರ್ಯದಲ್ಲಿ ಸಹಾಯ ದೊರೆಯಬಹುದು.

ನಾಗರಿಕತೆ ಮತ್ತು ಸಂಸ್ಕೃತಿಯ ಬೆಳವಣಿಗೆಯ ಇತಿಹಾಸದಲ್ಲಿ ಪ್ರಾಚೀನ, ಅರ್ವಾಚೀನ, ಆಧುನಿಕ - ಎಂಬ ಭೇದವನ್ನು ಎಣಿಸಲು ಶಕ್ಯವಿಲ್ಲ. ಏಕೆಂದರೆ ಬೆಳವಣಿಗೆ ಆದಿಕಾಲದಿಂದ ಇಂದಿನವರೆಗೂ ನಡೆದಿದೆ; ಮುಂದೆಯೂ

ನಡೆಯುತ್ತದೆ. ಬೆಳವಣಿಗೆ ನಮಗೆ ಎಷ್ಟರಮಟ್ಟಿಗೆ ಅನುಕೂಲ ಅಥವಾ ಪ್ರತಿಕೂಲವೆಂಬುದು ನಮ್ಮ ನಮ್ಮ ಸಭ್ಯತೆಯನ್ನವಲಂಬಿಸಿರುತ್ತದೆ. ಈ ದೃಷ್ಟಿಯಿಂದ ವ್ಯಾಸಂಗದ ಅನುಕೂಲಕ್ಕೆ ಮಾತ್ರ ಕಲ್ಪಿಸಿಕೊಂಡಿರುವ "ಪ್ರಾಚೀನ" ಎಂಬ ಕಾಲದಲ್ಲಿ ನಮ್ಮ ಪೂರ್ವಿಕರು ಅನುಸರಿಸಿದ ಪದ್ಧತಿ ಮತ್ತು ಸಂಘದ ನಿಯಮಗಳನ್ನು ನಾವು ಹೊಸ ರೂಪದಲ್ಲಿ ಅಳವಡಿಸಿಕೊಳ್ಳಬಹುದೇ ಹೊರತು ಎಲ್ಲವನ್ನೂ ತೀರ ಹೊಸದೆಂದು ಹೇಳುವ ಮನೋಪ್ರವೃತ್ತಿಯೇ ತಪ್ಪಾಗುತ್ತದೆ. ನಮ್ಮ ಪೂರ್ವಿಕರು ಸಾಮೂಹಿಕ ಕಾರ್ಯರಂಗದಲ್ಲಿ ಅನುಸರಿಸಲೇಬೇಕಾದ ಅಗತ್ಯದ ಮತ್ತು ಉಚಿತವಾದ ಉದ್ದೇಶದ ಅರಿವು ಇದ್ದೇ ಇದ್ದವು. ಅವರು ಎದುರಿಸಬೇಕಾಗಿದ್ದ ಕೆಲವು ಅನುಚಿತ ಕೃತ್ಯ ಅಥವಾ ತಪ್ಪುಗಳನ್ನು ನಾವು ತಿಳಿದುಕೊಳ್ಳದೆ ಈಗಿನ ಸಮಾಜದಲ್ಲಿ ಅವುಗಳನ್ನು ತಿದ್ದಿಕೊಳ್ಳಲಾಗುವುದಿಲ್ಲ. ಈ ತಪ್ಪುಗಳನ್ನು ಸುಧಾರಿಸಿ ಸರಿಪಡಿಸಿಕೊಳ್ಳಲು ಅವಕಾಶ ಒದಗಿವರೆ ಪ್ರಾಚೀನ ಇತಿಹಾಸವನ್ನು, ಸಂಸ್ಕೃತಿಯನ್ನು ಓದಿ ತಿಳಿದುಕೊಂಡದ್ದಕ್ಕೆ ಸಾರ್ಥಕವಾಗುತ್ತದೆ; ಮತ್ತು ಸಾಮಾಜಿಕ ಸ್ಥಿತಿಯನ್ನು ಸುವ್ಯವಸ್ಥೆಗೊಳಿಸುವ ಪ್ರಸಂಗ ಬಂದಲ್ಲಿ ಅವು ಮಾರ್ಗದರ್ಶಿಯಾಗುತ್ತವೆ. ಪ್ರಾಚೀನಕಾಲದ ಆದರ್ಶಗಳನ್ನು ತುಚ್ಛವಾಗಿ ಕೆಲವರು ಕಾಣುತ್ತಿದ್ದಾರೆ; ಮತ್ತೆ ಕೆಲವರು ಹಳೆಯ ಪದ್ಧತಿಗಳನ್ನು ಸಂಪೂರ್ಣವಾಗಿ ಹಾಳುಮಾಡಿ ಹೊಸದೊಂದನ್ನು ಸ್ಥಾಪಿಸುವ ಸನ್ನಾಹ ಮಾಡುತ್ತಿರುವರು. ಆದರೆ ಸಾವಿರಾರು ವರ್ಷಗಳಿಂದ ಬೇರೂರಿಕೊಂಡಿರುವ ಪದ್ಧತಿ

ಗಳೆಲ್ಲವನ್ನೂ ಹಳೆಯದೆಂದು ತೆಗೆದು ಕೆಲವು ದಿವಸಗಳಲ್ಲಿ ನಿರ್ಮೂಲ ಮಾಡುವುದು ಕಠಿಣ ಕೆಲಸ. ಏಕೆಂದರೆ ಸಾಮಾಜಿಕ ವ್ಯವಸ್ಥೆ ಹೊಸದಾಗಿ ಏರ್ಪಟ್ಟರೂ ಮನುಷ್ಯ - ಮನುಷ್ಯರ ವ್ಯವಹಾರಗಳಲ್ಲಿ ಮಾನವನಿಗೆ ಸಂಪೂರ್ಣ ಸ್ವಾತಂತ್ರ್ಯವಿದ್ದು ಅವುಗಳನ್ನು ಅವನೇ ರೂಪಿಸಿಕೊಳ್ಳಬೇಕಾಗಿದೆ. ಹೊಸ ವಿಚಾರಗಳಲ್ಲಿ ಜನರಿಗೆ ವಿದ್ಯೆ ಕಲಿಸಬೇಕು; ಅವರ ಮನಸ್ಸನ್ನು ಹಳೆಯ ಪದ್ಧತಿಗಳೆಲ್ಲವೂ ಹಿಂಸಾತ್ಮಕವೆಂದು ಒಪ್ಪುವಂತೆ ಬದಲಿಸಬೇಕು; ಮತ್ತು ಕ್ರಮೇಣ ಹೊಸ ಪದ್ಧತಿಗಳನ್ನು ಆಚರಣೆಗೆ ತರಬೇಕು. ಆದ್ದರಿಂದ ಪ್ರಾಚೀನಕಾಲದ ಸಾಮಾಜಿಕ ಸ್ಥಿತಿಯಲ್ಲಿ ನಿಜವಾಗಿಯೂ ತೊಂದರೆಯೆನಿಸಿದ ದುಷ್ಟ ಪದ್ಧತಿಗಳೇನಾದರೂ ಇದ್ದರೆ ಅವುಗಳ ದುಷ್ಪರಿಣಾಮಗಳನ್ನು ತಿಳಿಸಬೇಕು.

ಅನೇಕ ವರ್ಷಗಳ ಹಿಂದೆ ಮಾನವಕೋಟಿಯ ಜೀವನಕ್ಕೆ ಮೆರುಗು ಕೊಟ್ಟು, ಅನುಕೂಲಪಡಿಸಿಕೊಟ್ಟು ಉಪಯುಕ್ತವೆಂದು ಸಮರ್ಥನೆ ಸಿಕ್ಕಿರುವ ಪದ್ಧತಿಗಳನ್ನು ಸಂಪೂರ್ಣವಾಗಿ ಬಿಡುವುದು ಅಸಾಧ್ಯವಾದ ಕೆಲಸ. ಹಿಂದಿನ ಪದ್ಧತಿಗಳಲ್ಲಿ ಗುಣಗಳಿರದಿದ್ದರೆ ಇಲ್ಲಿಯವರೆಗೂ ಅವು ನಡೆದು ಬರದೆ ಆಗಿಂದಾಗಲೇ ನಶಿಸಿ ಹೋಗುತ್ತಿದ್ದವು. ಹೊಸ ಪದ್ಧತಿಗಳನ್ನು ಪ್ರಾರಂಭಿಸಿ ಆಚರಣೆಗೆ ತರುವುದು ತೀರ ಅನಿವಾರ್ಯ ಸಂದರ್ಭಗಳಲ್ಲಿ ಮಾತ್ರ. ಕೆಲವು ಹೊಸ ಪದ್ಧತಿಗಳನ್ನು ಜಾರಿಗೆ ತಂದು ಕೆಲ ಕಾಲದನಂತರ ಅವು ಪ್ರಯೋಜನವಿಲ್ಲವೆಂಬುದು ಗೊತ್ತಾಗಿ ಅವುಗಳನ್ನು ತೆಗೆದುಹಾಕಿರುವ ಸಂದರ್ಭಗಳೂ ಇಲ್ಲದೇ ಇಲ್ಲ.

## ಪ್ರಾಚೀನ ಭಾರತದ ಸಾಮಾಜಿಕ ಜನಜೀವನದ ತಿಳಿವಳಿಕೆಯ ಅಗತ್ಯ



ನಮ್ಮ ಪ್ರಗತಿಗೆ ಸಾಮಾಜಿಕ ಮತ್ತು ನೈತಿಕ ಪದ್ಧತಿಗಳು ಅವಶ್ಯವಾಗಿ ಬೇಕಾಗಿವೆ. ಈಗಿನ ವಿಜ್ಞಾನ ಮತ್ತು ತಾಂತ್ರಿಕ ಯುಗಕ್ಕೆ ಸರಿಹೋಗುವ ಸಾಮಾನ್ಯ ಪದ್ಧತಿಗಳನ್ನು ಸ್ವಲ್ಪ ಸ್ವಲ್ಪ ಬದಲಾವಣೆಯೊಂದಿಗೆ ಆಚರಣೆಗೆ ತರಬೇಕಾಗಿದೆ. ಈ ಪದ್ಧತಿಗಳು ಜನಜೀವನವನ್ನು ಬಲಗೊಳಿಸಿ ಸ್ಥಿರವಾಗಿಡಲು ಯೋಗ್ಯವಾಗಿರಬೇಕು. ಹಿಂದಿನ ಪಾಶ್ಚಾತ್ಯ ಗ್ರಂಥಗಳಲ್ಲಿ (ಪ್ಲೇಟೋ, ಅರಿಸ್ಟಾಟಲ್ ಇತ್ಯಾದಿಯವರ) ಸಮಾಜವು ಹೇಗಿತ್ತೆಂಬ ವಿವರಣೆ ಮಾತ್ರ ದೊರೆಯದೆ ಸಮಾಜ ವ್ಯವಸ್ಥೆ ಹೇಗಿರಬೇಕೆಂಬುದೂ ಗೊತ್ತಾಗುತ್ತದೆ. ಆದ್ದರಿಂದ ಉತ್ಕೃಷ್ಟ ಪದ್ಧತಿಗಳನ್ನು ಈಗಿನ ವಾತಾವರಣಕ್ಕೆ ಸರಿಹೋಗಿಸಿಕೊಂಡು ಆಚರಿಸಬೇಕಾಗಿದೆ; ಪರಿಣಾಮವಾಗಿ ವ್ಯಕ್ತಿ ಪ್ರಾಧಾನ್ಯವನ್ನು ಸ್ಥಾಪಿಸಿಕೊಂಡು ಸಮಾಜದ ಏಳಿಗೆಗಾಗಿ ಕೆಲಸ ಮಾಡಬೇಕು. ಗ್ರಂಥಗಳು ಸಮಾಜವನ್ನು ವರ್ಣಿಸುವುದರ ಜತೆಗೆ ಕೆಲವು ಆದರ್ಶ ವ್ಯಕ್ತಿಗಳ ಮೂಲಕವಾಗಿ ( Thinkers or Philosophers ) ಮಾನವನ ಪರಸ್ಪರ ಸಂಬಂಧ ಹೇಗಿರಬೇಕೆಂದು ವ್ಯಕ್ತಪಡಿಸಿವೆ. ಸಮಾಜವ್ಯವಸ್ಥೆಯ ತತ್ವ ಸಿದ್ಧಾಂತಗಳು ಹೇಳಲ್ಪಟ್ಟಿವೆ. ಈಗಿನ ಸಮಾಜಸ್ಥಿತಿಗೂ ಪ್ರಾಚೀನ ಸಮಾಜ ಸ್ಥಿತಿಗೂ ತಾರತಮ್ಯವಿದೆಯೋ ಅಥವಾ ಹೊಂದಿಕೆ ಇದೆಯೋ ಎಂಬುದೂ ತಿಳಿಯುತ್ತದೆ. ಈ ಶಾಸ್ತ್ರಗಳಲ್ಲಿರುವ ವಿಚಾರ ಸರಣಿಯನ್ನು ಸಾಮಾನ್ಯ ಜನವರ್ಗಕ್ಕೂ ತಿಳಿಯಪಡಿಸಬೇಕೆಂದು ಹರ್ಬರ್ಟ ರಿಸ್ಲೆಯವರು ಅಭಿಪ್ರಾಯಪಡುತ್ತಾರೆ.

ಭಾರತೀಯ ಸಂಸ್ಕೃತಿಯಲ್ಲಿನ ಆದರ್ಶ ವಿಚಾರ

ಸರಣಿಗೂ, ಪಾಶ್ಚಾತ್ಯ ಸಭ್ಯತೆಯ ವಿಚಾರಸರಣಿಗೂ ವ್ಯತ್ಯಾಸ ವಿದೆ. ಭಾರತದಲ್ಲಿ ಇತ್ತೀಚೆಗೆ ಪ್ರಾಚೀನ ಸಂಸ್ಕೃತಿಗೆ ಬದಲಾಗಿ ಹೆಚ್ಚು ಹೆಚ್ಚಾಗಿ ಪಾಶ್ಚಾತ್ಯ ಪದ್ಧತಿಗಳು ಆಚರಣೆಗೆ ಬರುತ್ತಿವೆ. ಈ ಕಾರ್ಯದಲ್ಲಿ ಪಾಶ್ಚಾತ್ಯರ ಉತ್ತಮ ಅಂಶಗಳನ್ನು (ಶಿಸ್ತು, ಕ್ರಮಬದ್ಧತೆ, ಪೌರನ ಹೊಣೆಗಾರಿಕೆಯ ಅರಿವು ಇತ್ಯಾದಿ) ಆಚರಿಸುವ ಬದಲು ದುಶ್ಚಟಗಳನ್ನೇ ಹೆಚ್ಚಾಗಿ ತೆಗೆದುಕೊಳ್ಳು ತ್ತಿದ್ದೇವೆಂಬ ಆಕ್ಷೇಪವಿದೆ. ಈ ಆಕ್ಷೇಪದಲ್ಲಿ ಸತ್ಯಾಂಶವಿಲ್ಲದೇ ಇಲ್ಲ. ಪಾಶ್ಚಾತ್ಯ ಜೀವನದ ಎಷ್ಟೋ ಅಂಶಗಳು ಮೇಲ್ಮಟ್ಟದ ವಾಗಿಯೂ ಇವೆ. ಆದರೆ ಪಾಶ್ಚಾತ್ಯರ ನವೀನ ಪದ್ಧತಿಗಳೆಲ್ಲ ವನ್ನೂ, ಅನಾದಿ ಕಾಲದಿಂದಲೂ ತಮ್ಮ ಕೆಲವು ಪದ್ಧತಿಗಳನ್ನು ಅನುಸರಿಸಿಕೊಂಡು ಬಂದಿರುವ ಜನಸಾಮಾನ್ಯಕ್ಕೆ ಕಡ್ಡಾಯ ವಾಗಿ ಅನುಸರಿಸಲೇಬೇಕೆಂದು ಹೇಳುವುದು ಅಷ್ಟೊಂದು ಸರಿಯಾಗಲಾರದು.

ಭಾರತೀಯ ಸಾಮಾಜಿಕ ಪದ್ಧತಿಗಳಲ್ಲನೇಕವು ಭಾರ ತೀಯರ ಮನಸ್ಸನ್ನು ಸರಿಯಾದ ಮಾರ್ಗದಲ್ಲಿ ಎಳೆದುಕೊಂಡು ಹೋಗುವುದೊಂದೇ ಅಲ್ಲದೆ ಇಡೀ ಪ್ರಪಂಚದ ಮಾನವ ಕೋಟಿಯನ್ನು ಸಹಕಾರ, ಸ್ನೇಹ, ಪರಸ್ಪರ ತಿಳಿವಳಿಕೆಯಲ್ಲಿ ಬಂಧಿಸುವುದಕ್ಕೂ ಸಹಾಯವಾಗಬಹುದು. ಭಾರತದ ತತ್ತ್ವ ಶಾಸ್ತ್ರ ಸಿದ್ಧಾಂತಗಳಿಗೆ ಇಡೀ ಪ್ರಪಂಚದ ಮನ್ನಣೆ ದೊರೆತಿದೆ. ಭಾರತದಲ್ಲಿ ಇತ್ತೀಚೆಗೆ ಉಂಟಾಗಿರುವ ಗೊಂದಲ ಮತ್ತು ಸಾಮಾಜಿಕ ಭಿನ್ನ ಭಿನ್ನ ದೃಷ್ಟಿಗಳಿಗೆ ಮಧ್ಯಪ್ರಾಚೀನ ಕಾಲದ ಪದ್ಧತಿಗಳ ಗುಣವನ್ನರಿತು, ಮಾನವೀಯತೆಯನ್ನು ಬೆಳಸಿ

ಕೊಳ್ಳಬೇಕು. ಪ್ರಾಚೀನ ಸಮಾಜ ಜೀವನದಲ್ಲಿ ಸಹನೆಯಿಂದ ಕೂಡಿದ ನಿಯತವಾದ ನಿಯಂತ್ರಣವೇರ್ಪಟ್ಟಿತ್ತು. ಮಾನವನಿಗೆ ಸ್ವಾತಂತ್ರ್ಯ ಅಗತ್ಯ; ಆದರೆ ನಿಯಂತ್ರಿತವಾದ ಸ್ವಾತಂತ್ರ್ಯವೇ ದೇಶದ ಅಭ್ಯುದಯಕ್ಕೆ ಸಾಧಕವಾಗಿದೆ. ದೌಷ್ಟ್ಯತನ ಬಿಟ್ಟು ಮನಸ್ಸು ಮೃದುವಾಗದೆ ದಯಾರ್ದ್ರವಾಗಲಾರದೆ ಯಾವ ಧರ್ಮ, ಕರ್ಮ, ಅಥವಾ ಸುಧಾರಣೆಗಳಿಂದ ಪ್ರಯೋಜನ ವೇನು ?

# ೩. ಪ್ರಾಚೀನ ಭಾರತದಲ್ಲಿಯ ಸಾಮಾಜಿಕ ಜೀವನದ ಮುಖ್ಯಾಂಶಗಳು

## ಜನರು

ಈಗಿನವರೆಗೆ ಭಾರತದಲ್ಲಿ ನಡೆದಿರುವ ಸಂಶೋಧನೆಗಳನ್ನು ಪರಿಶೀಲಿಸಿ ಸಮಾಜ ಶಾಸ್ತ್ರಜ್ಞರು ನಮ್ಮ ದೇಶದಲ್ಲಿ ಏಳು ಬುಡಕಟ್ಟುಗಳು ಇವೆಯೆಂದು ಹೇಳುತ್ತಾರೆ. ಇವರು ಕಾಶ್ಮೀರ, ಪಂಜಾಬ, ರಜಪುತಸ್ಥಾನದ ಇಂಡೋ ಆರ್‍ಯರು; ಮದ್ರಾಸ್, ಹಿಂದಿನ ಹೈದರಾಬಾದ, ಮಧ್ಯಪ್ರದೇಶ, ಮತ್ತು ಮಧ್ಯಭಾರತದ ದ್ರಾವಿಡರು; ಬರ್ಮಾ, ನೇಪಾಳ, ಆಸಾಂ ಭಾಗದ ಮಂಗೋಲಿಯನರು; ಉತ್ತರ ಪ್ರದೇಶ, ಬಿಹಾರಿನ ಆರ್ಯ-ದ್ರಾವಿಡರು; ಬಂಗಾಳ, ಓಡಿಸಾದ ಮಂಗೋಲೊ-ದ್ರಾವಿಡರು; ಮಹಾರಾಷ್ಟ್ರದ ಸಿಥಿಯೋ-ದ್ರಾವಿಡರು; ಬಲೂಚಿಸ್ತಾನ್ ಮತ್ತು ವಾಯುವ್ಯ ಪ್ರದೇಶದ ತುರ್ಕಿ-ಇರಾನಿಯರು. ಕೆಲವು ಶಾಸ್ತ್ರಜ್ಞರು ಈ ಬುಡಕಟ್ಟುಗಳನ್ನು ಒಪ್ಪಿಕೊಳ್ಳುವುದಿಲ್ಲ. ಏಕೆಂದರೆ ಪರಕೀಯರ ವರ್ಚಸ್ಸು ಭಾರತದ ನಿವಾಸಿಗಳ ಮೇಲೆ ಹೆಚ್ಚಿನ ಮತ್ತು ಶಾಶ್ವತವಾದ ಪ್ರಮಾಣದಲ್ಲಿಲ್ಲ. ಆದ್ದರಿಂದ ಭಾರತೀಯರಲ್ಲಿ ಮೂರು ಮುಖ್ಯ ಗುಂಪುಗಳನ್ನು ಹೇಳ

ಬಹುದು: ಗುಡ್ಡ ಮತ್ತು ಅರಣ್ಯ ಪ್ರದೇಶದ ಪ್ರಿ-ದ್ರಾವಿಡರು; ದ್ರಾವಿಡರು ಮತ್ತು ಆರ್ಯರು.

## ಮಾನವೀಯತೆ

ಭಾರತದ ಪ್ರಾಚೀನ ಸಾಮಾಜಿಕ ವ್ಯವಸ್ಥೆಯಲ್ಲಿ ಮಾನವೀಯತೆಗೆ ಪ್ರಾಧಾನ್ಯವಿತ್ತು. ಯಾವುದೇ ಪದ್ಧತಿ, ಸಂಘಗಳೇರ್ಪಟ್ಟರೂ ಅವು ಜನರ ಆವಶ್ಯಕತೆಗಳನ್ನವ-ಲಂಬಿಸಿದ್ದವು. ಮಾನವನ ಆವಶ್ಯಕತೆಗಳು ಅವನ ಮನೋ ಪ್ರವೃತ್ತಿಯನ್ನವಲಂಬಿಸಿದ್ದವು. ಒಬ್ಬ ಮನುಷ್ಯನಿಗೂ ಮತ್ತೊಬ್ಬನಿಗೂ ಇರುವ ಸಂಬಂಧಗಳು ಖಚಿತವಾಗಿ ವರ್ಣಿತವಾಗಿದ್ದವು. ವ್ಯಕ್ತಿಯ ಸಾಮಾಜಿಕ ವ್ಯವಹಾರಗಳು, ದಿನ ಜೀವನ, ಜೀವನದ ಗುರಿ, ಆಕಾಂಕ್ಷೆ ಮತ್ತು ಸಹಾನು-ಭೂತಿಯಿಂದ ಕೂಡಿದ ಸಾಮೂಹಿಕಜೀವನ ಏರ್ಪಟ್ಟಿದ್ದಿತು.

ಪ್ರಾಚೀನ ಭಾರತದಲ್ಲಿ ಜೀವನದ ಮುಖ್ಯ ಉದ್ದೇಶವು, (ಪ್ರಾಪಂಚಿಕ ಸುಖ ಸಂಪಾದನೆಯೊಂದಿಗೆ) ಪಾರಮಾರ್ಥಿಕ ನಂಬಿಗೆಯ ಮೇಲೆ ಅವಲಂಬಿಸಿದ್ದಿತು. ಜನನ, ಮರಣ, ಮುಂದಿನ ಜನ್ಮ, ಈ ಜೀವಿತ ಕಾಲದಲ್ಲೇ ಮೋಕ್ಷ ಸಂಪಾದನೆಯ ಗುರಿ ಸಾಧಿಸಿ ಜನನ ಮರಣಗಳೆಂಬ ಬಂಧನದಿಂದ ಮುಕ್ತನಾಗುವುದು—ಈ ಉದ್ದೇಶಗಳಿದ್ದವು. ಪ್ರತಿಯೊಂದು ಕಾಲದಲ್ಲಿಯೂ ಜನರಿಗೆ ಅಗತ್ಯವೆನಿಸುವ ಉದ್ದೇಶಗಳಿರುತ್ತವೆ. ಪೂರ್ವಿಕರ ಉದ್ದೇಶಗಳನ್ನು ಆಧುನಿಕ ದೃಷ್ಟಿಯಿಂದ ಅಳೆಯು ವುದು ತಪ್ಪು. ಮಾನವನಾಗಿ ಹುಟ್ಟಿದವನು ಧರ್ಮವನ್ನಾಚರಿಸಿ

ಬಂಧಮುಕ್ತನಾಗಲು ಪ್ರಯತ್ನಿಸಬೇಕೆಂಬ ಭಾವನೆ ಇತ್ತು. ಆತ್ಮ ಒಂದೇ, ಅದು ಅನೇಕ ದೇಹಗಳ ರೂಪವನ್ನು ಧರಿಸುವುದೆಂಬ ತತ್ವವು ವೇದ, ಸಂಹಿತೆ, ಬ್ರಾಹ್ಮಣ, ಆರಣ್ಯಕ, ಉಪನಿಷತ್ತು, ಸೂತ್ರ, ಸ್ಮೃತಿ, ಮಹಾಕಾವ್ಯಗಳು ಮತ್ತು ಧರ್ಮಶಾಸ್ತ್ರದಲ್ಲಿ ನಿರೂಪಿತವಾಗಿದೆ. ಮಹಾಭಾರತದಲ್ಲಂತೂ ಕರ್ಮವಾದವು ಸ್ಪಷ್ಟವಾಗಿ ಹೇಳಲ್ಪಟ್ಟಿದೆ. ಮಾನವನ ಅತೃಪ್ತಿಕರವಾದ ಜೀವನಕ್ಕೂ, ಸುಖಮಯವಾದ ಜೀವನಕ್ಕೂ ಕರ್ಮವೇ ಆಧಾರವಾಗಿತ್ತು. ಧರ್ಮವನ್ನನುಸರಿಸುತ್ತಿದ್ದ ಕೀಳುವರ್ಣದವರಾದರೂ ಉತ್ತಮ ವರ್ಣದವರಿಂದ ಮಾನ್ಯತೆ ಪಡೆಯುತ್ತಿದ್ದರು. ಧರ್ಮವೆಂದರೆ (ಮನುವಿನ ಪ್ರಕಾರ) ವಿದ್ವಜ್ಜನರಿಂದ ಅಂಗೀಕರಿಸಲ್ಪಟ್ಟು, ಸಜ್ಜನರಿಂದ ಆಚರಿಸಲ್ಪಡುವ ಮಾರ್ಗ.

ಮಾನವಕೋಟಿಯ ಮೇಲೆ ಈಗಲೂ ಸಹ ಗೀತೆಯ ಪ್ರಭಾವವು ದೊಡ್ಡದು. ನೈತಿಕ ಮತ್ತು ಸಾಮಾಜಿಕ ಕಾರ್ಯರಂಗದಲ್ಲಿ ಗೀತೆ ಮಾರ್ಗದರ್ಶನ ನೀಡುತ್ತದೆ; ಗೀತೆಯು ಅತ್ಯಂತ ಮಹತ್ವದ ಸಾಹಿತ್ಯ ಭಂಡಾರ. ಕರ್ಮವಾದದಲ್ಲಿ ಅದು ನಂಬಿಕೆ ಬೆಳೆಸುತ್ತದೆ. ಸರ್ವಕಾಲಕ್ಕೂ ಗೀತೆಯ ಸಂದೇಶ ತನ್ನ ಕರ್ತವ್ಯವನ್ನು ಮಾಡುವುದು. ಮತ್ತು ತನ್ನ ಸ್ವಧರ್ಮವನ್ನು ಆಚರಿಸಿ ಪ್ರತಿಕ್ಷಣದಲ್ಲಿಯೂ ಕರ್ಮಮಾಡುವುದು. ಈ ಸಂದೇಶ ಅತಿ ಹಿರಿದಾದದ್ದು. ಏಕೆಂದರೆ ಜೀವನದ ಗುರಿ ಸಾವಲ್ಲ; ಅಮರತ್ವ. ಅಂದರೆ ಕರ್ಮಯೋಗದಿಂದ ಜನನ ಮರಣ ಬಂಧನದಿಂದ ಮುಕ್ತನಾಗಿ ಅಮರತ್ವವನ್ನು ಪಡೆಯುವುದು. ಹೀಗಾಗಿ ಪ್ರಾಚೀನ

## ಮುಖ್ಯಾಂಶಗಳು

ಸಾಮಾಜಿಕ ಪದ್ಧತಿ ಮತ್ತು ವ್ಯವಸ್ಥೆ ಎಲ್ಲವೂ ವ್ಯಕ್ತಿಯು ಮೋಕ್ಷವನ್ನು ಪಡೆಯಲು ಏರ್ಪಡಿಸಿಕೊಂಡ ಸಾಧನಗಳಾಗಿದ್ದವು. ಉದಾ: ಚತುರಾಶ್ರಮಗಳು, ವರ್ಣಧರ್ಮ, ವಿದ್ಯಾರ್ಜನೆ, ವಿವಾಹಪದ್ಧತಿ, ಕುಟುಂಬವ್ಯವಸ್ಥೆ, ವ್ಯಕ್ತಿ ಹಾಗೂ ಸಾಮೂಹಿಕ ನಡೆವಳಿಕೆ - ಇವೆಲ್ಲವೂ ಮುಕ್ತಿ ಸಂಪಾದನೆಯ ದಾರಿಗೆ ಸಹಾಯಕವಾಗಿದ್ದವು.

## ಆಶ್ರಮಗಳು

ಮನುಸ್ಮೃತಿಯ ಪ್ರಕಾರ ಮನುಷ್ಯನ ನೂರುವರ್ಷ ಆಯುಷ್ಯದಲ್ಲಿ ಇಪ್ಪತ್ತೈದು ವರ್ಷಕ್ಕೊಂದು ಆಶ್ರಮವಾಸ ಹೇಳಲ್ಪಟ್ಟಿದೆ – ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸನ್ಯಾಸ. ಈ ಆಶ್ರಮ ಧರ್ಮಗಳ ಸೌಕರ್ಯವೇನೆಂದರೆ ಮೂಲತಃ ವ್ಯಕ್ತಿಗೆ ತಾನು ಜಗತ್ತಿನಲ್ಲಿ ಜೀವಿಸುವುದಕ್ಕಾಗಿ, ಸಂಸಾರ ಸಾಗಿಸುವುದಕ್ಕಾಗಿ ತನ್ನ ಜೀವನೋಪಾಯವನ್ನು ಬ್ರಹ್ಮಾಂಡದ ಒಂದು ಭಾಗವೆಂದು ತಿಳಿದು, ಸಾಮಾಜಿಕ ಕ್ಷೇತ್ರದಲ್ಲಿ ಪ್ರಾಪಂಚಿಕ ಬಂಧನಗಳಿಂದ ವ್ಯಥೆಗೊಳ್ಳದೆ, ಪ್ರತಿ ಆಶ್ರಮದಲ್ಲಿಯೂ ದೊರೆತ ಶಿಕ್ಷಣ, ಶಿಸ್ತು, ಅನುಭವದ ಸಹಾಯದಿಂದ ಸೇವೆ ಸಲ್ಲಿಸುವುದು. ಅದೇ ಮಾರ್ಗವನ್ನನುಸರಿಸಿ ಮುಕ್ತಿ ಸಂಪಾದನೆಗೆ ಅರ್ಹನಾಗುವುದು. ಆಶ್ರಮ ಮತ್ತು ವರ್ಣ ಧರ್ಮಗಳ ತಳಹದಿ ಧರ್ಮ (ಕರ್ತವ್ಯ) ಪಾಲನೆ. ಅತ್ಯುತ್ತಮವಾದ ಸಾಮಾಜಿಕ ಸ್ಥಿತಿಗೆ ಮಾನವನ ನಾಲ್ಕು

ಬೆಳವಣಿಗೆಯ ಅಂಶಗಳು—ದೇಶ, ಕಾಲ, ಶ್ರಮ, ಗುಣ-ಪ್ರಧಾನ. ಆಶ್ರಮ ಧರ್ಮವು ಈ ಅಂಶಗಳನ್ನವಲಂಬಿಸಿತ್ತು.

## ವಿದ್ಯಾರ್ಜನೆ

ಆಶ್ರಮಗಳಲ್ಲಿ ಪ್ರಥಮ ಬ್ರಹ್ಮಚರ್ಯಾಶ್ರಮ. ಈ ಕಾಲದಲ್ಲಿ ವಿದ್ಯಾರ್ಜನೆ ಮುಖ್ಯವಾದ ಗುರಿ. ಒಂದು ಸಮಾಜದ ಪದ್ಧತಿಗಳು ಆ ಸಮಾಜದಲ್ಲಿನ ವಿದ್ಯಾಭ್ಯಾಸ ಪದ್ಧತಿಯನ್ನು ನಿರ್ಧರಿಸುತ್ತವೆ. ಸಮಾಜದಲ್ಲಿ ನಡೆದುಬಂದಿರುವ ಸಂಪ್ರದಾಯಗಳು, ಶಿಸ್ತು, ಶಿಕ್ಷಣ, ಸಂಸ್ಕೃತಿಗಳನ್ನು ಈಗಿನ ಮತ್ತು ಮುಂದಿನ ಪೀಳಿಗೆಗೆ ಕಲಿಸಿಕೊಡುವುದರಲ್ಲಿ ವಿದ್ಯೆ ಅತಿ ಪ್ರಧಾನವಾದ ಸಾಧನವಾಗಿದೆ. ಸಮಾಜವು ಹಿಂದಿನ ಯಾವ ಪದ್ಧತಿಗಳನ್ನು ಬೇಕಾದರೂ ಬಿಡಬಹುದು. ಅಥವಾ ಉಳಿಸಿಕೊಳ್ಳಬಹುದು. ಆದರೆ ವಿದ್ಯಾಭ್ಯಾಸ ಪದ್ಧತಿಯನ್ನು ಮಾತ್ರ ಬಿಡುವಂತಿಲ್ಲ. ಈ ಪದ್ಧತಿಯಲ್ಲಿ ಯಾವ ಮಾರ್ಪಾಟು ಮಾಡಿಕೊಂಡರೂ ಇದರ ಸಾಧನೆ ಅತ್ಯಂತ ದೊಡ್ಡದು. ಜೀವನದ ಅಂತರಾಳವನ್ನು ಹೊಕ್ಕು ನಿತ್ಯ ಆಚರಣೆಗೆ ಆವಶ್ಯಕವಾದ ಸಿದ್ಧಾಂತವನ್ನು ಇದು ಕಲಿಸುತ್ತದೆ. ವ್ಯಕ್ತಿಯು ಸಮಾಜ ಸೇವೆಗಾಗಿ ತನ್ನ ಪ್ರಾರಂಭದ ದಿನಗಳಲ್ಲಿ ನಿರ್ದಿಷ್ಟವಾದ ಶಿಕ್ಷಣಾ-ಭ್ಯಾಸವನ್ನು ನಡೆಸಲೇಬೇಕು. ಪ್ಲೇಟೋ, ಅರಿಸ್ಟಾಟಲ್, ರೂಸೋ ಮತ್ತು ಇತರರು ವಿದ್ಯೆಯ ಸ್ವೀಕಾರಕ್ಕೆ ಮಹತ್ವದ ಸ್ಥಾನ ಕೊಟ್ಟಿರುವರು. ವಿದ್ಯಾರ್ಜನೆಯು ಸಮಾಜದಿಂದ ಅಂಗೀಕರಿಸಲ್ಪಟ್ಟ ನಡವಳಿಕೆ, ಪದ್ಧತಿ, ಸಂಸ್ಕೃತಿಯನ್ನು

ವೃದ್ಧಿಸುವುದು. ಸಮಾಜದ ನೈತಿಕ, ಸಾಮಾಜಿಕ, ಸಾಂಸ್ಕೃತಿಕ ತತ್ವ ಮತ್ತು ನಂಬುಗೆಗಳನ್ನು ಇದು ಗೊತ್ತುಪಡಿಸುತ್ತದೆ. ಸಮಾಜದ ಅಭಿವೃದ್ಧಿಗೆ ವ್ಯಕ್ತಿಯನ್ನು ಹದಗೊಳಿಸುವುದೇ ವಿದ್ಯಾಭ್ಯಾಸ ಪದ್ಧತಿಯ ಮುಖ್ಯ ಉದ್ದೇಶ.

ಬ್ರಾಹ್ಮಣ, ಕ್ಷತ್ರಿಯ, ಮತ್ತು ವೈಶ್ಯ ವರ್ಣಗಳಲ್ಲಿ ಜನಿಸಿದ ಹುಡುಗರೆಲ್ಲರೂ ಉಪನಯನ ಸಂಸ್ಕಾರಾನಂತರ ವಿದ್ಯೆ ಕಲಿಯಬೇಕಿತ್ತು. ಗುರುವು ಶಿಷ್ಯನಿಗೆ ಆಶೀರ್ವದಿಸು ವಾಗ ತಲೆಯ ಮೇಲೆ ತನ್ನ ಕೈಯನ್ನಿಡುವದು– ತನ್ನ ವ್ಯಕ್ತಿತ್ವ ವನ್ನೇ ಹೊಂದು ಎಂದು ಅರ್ಥ. ಎಂಥ ಉದಾತ್ತವಾದ ಧ್ಯೇಯ! ಈ ಸಂಸ್ಕಾರ ಎಲ್ಲಾ ಜನರಲ್ಲೂ ವಿಧವಿಧವಾಗಿ ಏರ್ಪಟ್ಟಿತ್ತು. ಗುಡ್ಡಗಾಡು ಜನರೂ ಸಹ ಬಿಲ್ಲುಗಾರಿಕೆ ವಿದ್ಯೆ ಯನ್ನು ಕಲಿಯುವಾಗ ಸಂಸ್ಕಾರ ಆಚರಿಸಬೇಕಿತ್ತು. ಸಂಸ್ಕಾರ ಗಳನ್ನು ನೆರವೇರಿಸಿದರೆ ಆಯಾ ಕಾರ್ಯಗಳಿಗೆ ಅವಶ್ಯವೆನಿಸಿದ ಗೌರವ, ಗಂಭೀರತೆ ದೊರೆಯುತ್ತಿತ್ತು. ಬ್ರಹ್ಮಚರ್ಯಾಶ್ರಮ ಪಾಲನೆಯಲ್ಲಿ ಆಹಾರ ಸೇವನೆ, ನಿದ್ರೆ, ಉಡಿಗೆ ಇವುಗಳಲ್ಲಿ ನಿರ್ಬಂಧವಿತ್ತು. ಶಿಷ್ಯನು ತಾಯಿತಂದೆಗಳಿಂದ ದೂರವಾಗಿ ಗುರುವಿನ ಆಶ್ರಮದಲ್ಲಿ ವಾಸ ಮಾಡಬೇಕಾಗಿತ್ತು. ಶಿಷ್ಯನ ವ್ಯಾಸಂಗ ಪೂರ್ಣವಾಗಿ ಸದ್ಗುಣಗಳನ್ನು ಕಲಿಯಬೇಕಾಗಿದ್ದರೆ ಗುರುವಿನ ಪೂರ್ಣ ಅನುಗ್ರಹ ಬೇಕಿತ್ತು. (ತೈತ್ತರೀಯ ಉಪನಿಷತ್ತು). ಕಲಿಯುತ್ತಿದ್ದ ವಿಷಯಗಳು ಆಳವಾಗಿದ್ದವು. ಪ್ರಾರಂಭದಲ್ಲಿ ೩ ವೇದಗಳು, ನಂತರ ೪ನೆ ವೇದ ಷಡಂಗ

( ಶಿಕ್ಷ, ಕಲ್ಪ, ವ್ಯಾಕರಣ, ನಿರುಕ್ತ, ಛಂದಸ್ಸು, ಜ್ಯೋತಿಷ ) ನಂತರ ಆಯುರ್‌ವಿದ್ಯೆ, ಧನುರ್ವಿದ್ಯೆ. ೧೪ ವಿಜ್ಞಾನಗಳು ಮತ್ತು ೬೪ ಕಲೆಗಳು. ವಿದ್ಯೆ ಕಲಿಸಿದ ಗುರುವಿನ ನಿಂದೆ ಮಾಡುವುದು ಅಪರಾಧವೆನಿಸಿತ್ತು. ವಿದ್ಯೆ ಕಲಿಸುವ ಗುರುವು ಹೇಳಿಕೊಟ್ಟ ವಿದ್ಯೆಗೆ ಹಣ ತೆಗೆದುಕೊಳ್ಳುತ್ತಿರಲಿಲ್ಲ. ಉಚಿತ ವಿದ್ಯಾಭ್ಯಾಸ ಪ್ರಾಚೀನ ಭಾರತದ ವಿದ್ಯಾಪದ್ಧತಿಯ ಮೂಲಾಂಶವಾಗಿತ್ತು. ಬಾಹ್ಯಾಡಂಬರಗಳಿಂದ ವಿದ್ಯಾಪದ್ಧತಿ ಬಂಧಿತವಾಗಿರಲಿಲ್ಲ. ವಿದ್ಯೆ ಕಲಿತನೆಂದು ಹೇಳುವ ಪರೀಕ್ಷೆಗಳಿರಲಿಲ್ಲ. ವಿದ್ಯಾಪಾರಂಗತ ನಾದವನಿಗೆ ಅತ್ಯಂತ ಹೆಚ್ಚಿನ ಗೌರವ ದೊರೆಯುತ್ತಿತ್ತು. ಅಂತವನು ವಯಸ್ಸಿನಲ್ಲಿ ಚಿಕ್ಕವನಾದರೂ ಮನ್ನಣೆ ಸಿಗುತ್ತಿತ್ತು. ವಿವಾಹದ ಪೂರ್ವ ವರನು ವಿದ್ಯೆ ಕಲಿತಿರುವನೇ ಇಲ್ಲವೇ ವಿಚಾರಿಸಬೇಕಿತ್ತು. ಕೌಟಿಲ್ಯನ ಪ್ರಕಾರ ವಿದ್ಯೆ ಕಲಿಯುವುದು ಪಂಚೇಂದ್ರಿಯಗಳನ್ನು ನಿಯಂತ್ರಿಸುವದಕ್ಕಾಗಿ. ವಿದ್ಯಾಭ್ಯಾಸ ಪದ್ಧತಿಯಲ್ಲಿ ಗುಣ ಕಲಿಸುವುದಕ್ಕೆ ಪ್ರಧಾನ ಸ್ಥಾನವಿತ್ತು. ಶಿಷ್ಯನು ಬೆದರಿಕೆಯಿಲ್ಲದೆ ತನ್ನ ಸ್ವಂತ ಮನೋಪ್ರವೃತ್ತಿಯಿಂದ ಕಲಿಯಬೇಕು. ವಿದ್ಯಾ ಪದ್ಧತಿಯು ರಾಜ್ಯ ಅಥವಾ ಪಕ್ಷಗಳಿಂದ ಬಂಧಿತವಾಗಿರಲಿಲ್ಲ. ಗೊತ್ತಾದ ಪಾಠಗಳ ವಿಚಾರವಾಗಿ ನಿರ್ಬಂಧವಿರಲಿಲ್ಲ; ತಿಳಿಯಲು ಯೋಗ್ಯವಾದ ಪ್ರತಿಯೊಂದನ್ನೂ ಹೇಳಬೇಕಿತ್ತು. ಸ್ತ್ರೀಯರೂ ವಿದ್ಯೆ ಕಲಿಯಬೇಕಿತ್ತು ( ವಾತ್ಸಾಯನ ). ಬಾಲ್ಯದಲ್ಲಿ ಸ್ಮರಣಶಕ್ತಿಯನ್ನೂ ನಂತರ ವಿವೇಚನಾ ಶಕ್ತಿಯನ್ನೂ ಕಲಿಸುವುದೇ ವಿದ್ಯಾಪದ್ಧತಿಯ ಮುಖ್ಯ ಉದ್ದೇಶವಾಗಿತ್ತು. ೮ ನೆ ವರ್ಷದ ಹೊತ್ತಿಗೆ

ಓದು, ಬರೆಹ, ಸಾಮಾನ್ಯ ಗಣಿತ, ನಿಘಂಟು, ವ್ಯಾಕರಣ ಇವುಗಳನ್ನು ದೇಶಭಾಷೆಯಲ್ಲಿ ಉಚಿತ ಪ್ರಾಥಮಿಕ ಶಾಲೆ ( ಮಠ ) ಗಳಲ್ಲಿ ಹಲಗೆ ಅಥವಾ ಓಲೆಗರಿಯ ಮೇಲೆ ಕಲಿಸುತ್ತಿದ್ದರು. ಶಿಕ್ಷಣ ಪಡೆದವನು ಸಾಮಾಜಿಕ, ಆಧ್ಯಾತ್ಮಿಕ ಕರ್ತವ್ಯಪಾಲನ ದೃಷ್ಟಿ ಇಟ್ಟುಕೊಳ್ಳದೇ ಸಾಧ್ಯವಿರಲಿಲ್ಲ. ಶಿಕ್ಷಣದಿಂದ ದೇಹ, ಮನಸ್ಸು ಮತ್ತು ಆತ್ಮ ಇವುಗಳ ಕಾರ್ಯವನ್ನು ಒಟ್ಟುಗೂಡಿಸಿ ಪರದೈವವನ್ನು ಧ್ಯಾನಿಸಿ ಆತ್ಮೋದ್ಧಾರ ಮಾಡಿಕೊಳ್ಳುವುದೇ ಧ್ಯೇಯವಾಗಿದ್ದಿತು.

ಶಿಷ್ಯನು ವಿದ್ಯೆಕಲಿತು ಗುರುವಿನ ಅಪ್ಪಣೆ ಪಡೆಯುವಾಗ ಸತ್ಯವನ್ನು ಹೇಳಬೇಕೆಂದೂ, ಇನ್ನೂ ಹೆಚ್ಚಿನ ಭಾಗವನ್ನು ತಾನೇ ಅಭ್ಯಾಸ ಮಾಡಿ ತಿಳಿಯಬೇಕೆಂದೂ ವಿದ್ಯೆಯನ್ನು ಶಿಷ್ಟ ಸಂರಕ್ಷಣೆಗೆ, ಸೇವಗೆ ಉಪಯೋಗಿಸಬೇಕೆಂದೂ ಗುರು ಉಪದೇಶ ಕೊಡುತ್ತಿದ್ದನು.

ಈ ವಿಧವಾದ ಗುರುಕುಲಗಳಲ್ಲದೇ ಪ್ರಾಚೀನ ಭಾರತದಲ್ಲಿ ಕಾಶಿ, ತಕ್ಷಶಿಲೆ, ನಾಲಂದ, ಉಜ್ಜಯಿನಿ, ವಿಕ್ರಮಶಿಲಾ ಮತ್ತು ಕರ್ನಾಟಕದಲ್ಲಿ ಬೆಳಗಾವಿಯ ಕೋಡಿಮಠ (ಕ್ರಿ. ಶ. ೧೧ನೆ ಶತಮಾನ ) ಇವು ಉನ್ನತ ಸ್ಥಿತಿಯಲ್ಲಿದ್ದು ವಿದ್ಯಾಪ್ರಸಾರ ಮಾಡಿ ಕೀರ್ತಿ ಗಳಿಸಿದವು.

ಇಂದಿನ ವಿದ್ಯೆ ಎಷ್ಟೇ ಹಿರಿದಾಗಿದ್ದರೂ ದುಷ್ಟ ಸ್ವಭಾವವನ್ನು ಬದಲಾಯಿಸುವುದರಲ್ಲಿ ಅನಿಶ್ಚಿತವಾಗಿದೆ. "ವಿದ್ಯೆಯು

ನಿಜವಾದ ಫಲ ಸಂಸ್ಕೃತಿ. ಆದರಿಂದ ವಿನಯವುಂಟಾಗಿ ಮನಸ್ಸು ಮೃದುವಾಗಿ ಪರರ ಕಷ್ಟದಲ್ಲಿ ಮರುಗಿ, ಕರಗಿ ಸಹಾನುಭೂತಿ ತೋರುವಂತಾಗಬೇಕು." ಕರ್ನಾಟಕ ವಿಶ್ವ-ವಿದ್ಯಾಲಯದ ಉಪಕುಲಪತಿಗಳಾಗಿದ್ದ ಶ್ರೀಮಾನ್ ಡಿ. ಸಿ. ಪಾವಟೆಯವರು ಒಂದು ಸಂದರ್ಭದಲ್ಲಿ ಇಂದಿನ ವಿದ್ಯಾರ್ಥಿಗಳನ್ನುದ್ದೇಶಿಸಿ ಅವರನ್ನು "human ore" ಎಂದು ಕರೆದಿದ್ದಾರೆ; ಮತ್ತು ಇಂತಹ ಖಣಿಯನ್ನು ಪುಟಗೊಳಿಸಲು ಅಭ್ಯಾಸ ವರ್ಗದವರನ್ನು "Key men" ಎಂದು ಕರೆದಿದ್ದಾರೆ; ಈ ಮಾತುಗಳು ನಿಜ; ಇಂಥವರು ಕಲೆತ ಆವರಣವೇ ವಿದ್ಯಾ ಕೇಂದ್ರಗಳು.

## ವಿವಾಹ

ವಿವಾಹವೂ ಒಂದು ಸಂಸ್ಕಾರ. ಮಾನವನ ಲೈಂಗಿಕ ಸಂಬಂಧದ ನಿಯಂತ್ರಣವೇ ವಿವಾಹ ಪದ್ಧತಿಯ ಉದ್ದೇಶ. ವಿವಾಹದನಂತರ ಒಬ್ಬ ಮಗ ಜನಿಸಿದರೂ ಮೋಕ್ಷ ಸಂಪಾದನೆಯು ಸುಲಭವೆನಿಸಿತ್ತು. ಹೆಣ್ಣುಮಕ್ಕಳಿಗೆ ವಿವಾಹ ಪ್ರಾಪ್ತ ಕಾಲದಲ್ಲಿ, ಗಂಡು ಮಕ್ಕಳಿಗಿಂತ ಮೊದಲೇ ಆಗಬೇಕಿತ್ತು. ದಂಪತಿಯೇ ಎಲ್ಲ ಪುರುಷಾರ್ಥಗಳ-ಧರ್ಮ, ಅರ್ಥ, ಕಾಮ, ಮೋಕ್ಷ- ಮೂಲ.

ಪ್ರಾಪ್ತ ವಯಸ್ಸಿನಲ್ಲಿ ತಂದೆಯು ಹೆಣ್ಣುಮಕ್ಕಳ ವಿವಾಹ ಮಾಡದಿದ್ದರೆ ಪಾಪಕಾರ್ಯ ಮಾಡಿದಂತೆ; ಮುಂದೆ ಮೂರು ವರ್ಷದ ನಂತರ ಹಿರಿಯರು ವಿವಾಹ ಮಾಡದಿದ್ದರೆ ಆ ಹೆಣ್ಣು

ಮಗಳು ತನ್ನ ಇಷ್ಟ ಬಂದವನನ್ನು ವಿವಾಹ ಮಾಡಿಕೊಂಡು ಕುಟುಂಬ ಜೀವನ ನಡೆಸಬಹುದಿತ್ತು. ಮನು, ವಾತ್ಸಾಯನರೂ ಈ ಅಭಿಪ್ರಾಯ ಸೂಚಿಸಿದ್ದಾರೆ. ವಿವಾಹವು ಬ್ರಹ್ಮ, ದೈವ, ಆರ್ಷ, ಪ್ರಜಾಪತ್ಯ, ಅಸುರಾ, ಗಾಂಧರ್ವ, ರಾಕ್ಷಸ, ಪೈಶಾಚ ಎಂದು ೮ ವಿಧಗಳು; ೫ ಮತ್ತು ೮ನ್ನು ಬಿಟ್ಟು ಉಳಿದವು ನಿಯಮಬದ್ಧವಾಗಿದ್ದವು. ಸಾಮಾನ್ಯವಾಗಿ ಅಂಗೀಕರಿಸಲ್ಪಟ್ಟ ವಿವಾಹ ಪದ್ಧತಿ ಸಾಲಂಕೃತ ಕನ್ಯಾದಾನ.

ವರನು ಬ್ರಹ್ಮಚರ್ಯಾಶ್ರಮದ ಜೀವನವನ್ನು ಪೂರ್ಣ ಗೊಳಿಸಿರಬೇಕು. ವೇದಪಾರಂಗತನಾಗಿರಬೇಕು. ವಿದ್ಯಾ-ರ್ಜನೆ ಮಾಡಿದ್ದವರು ಮಾತ್ರ ವಿವಾಹಕ್ಕೆ ಅರ್ಹರು ಎಂದು ವಾತ್ಸಾಯನ ಹೇಳಿದ್ದಾನೆ.

ಧರ್ಮಶಾಸ್ತ್ರದ ಪ್ರಕಾರ ವಿವಾಹಕಾಲದಲ್ಲಿ ವಧೂ-ವರರ ಐಕ್ಯೆಯನ್ನು ವರ್ಣ, ಗೋತ್ರ, ಪ್ರವರ, ಸಪಿಂಡ-ಈ ಅಂಶ ಗಳನ್ನು ಪರಿಶೀಲಿಸಿ ತೀರ್ಮಾನಿಸಬೇಕಿತ್ತು. ತಾಯಿ, ತಂದೆ, ಮಕ್ಕಳು, ಸಹೋದರ, ಸಹೋದರಿಯರ ಪೈಕಿ ಲೈಂಗಿಕ ಸಂಪರ್ಕವಾಗದಂತೆ ನೋಡಿಕೊಳ್ಳುವುದೇ ಈ ಕಾನೂನುಗಳ ಉದ್ದೇಶ. ಈ ಮೇಲ್ಕಂಡವರಲ್ಲಿ ವಿವಾಹವಾದರೆ ಪಾತಕ-ವೆನಿಸಿದಂತೆ. ಕಾಲಕ್ರಮೇಣ ಈ ನಿಯಮಗಳು ಆಚರಣೆಯಲ್ಲಿ ಕಷ್ಟಕರವೆನಿಸಿದುದರಿಂದ ಕೆಲವು ಬದಲಾವಣೆಗಳುಂಟಾದವು: ತಾಯಿಯ ಸಂಬಂಧದವರಲ್ಲಿ ೫ ಡಿಗ್ರಿ( ೫ ತಲೆ), ತಂದೆಯ

ಸಂಬಂಧದವರಲ್ಲಿ ೭ ಡಿಗ್ರಿ(೭ ತಲೆ) ಕಳೆದನಂತರ ವಿವಾಹ-ಸಂಬಂಧ ಆಗಬಹುದಿತ್ತು. ಈ ನಿಯಮಗಳು ಪರದೇಶಗಳಲ್ಲಿಯೂ ಕಂಡುಬರುತ್ತವೆ.

ಪರಸ್ಪರ ಸಮಾನತೆ, ಅನ್ಯೋನ್ಯತೆಯ ಗುಣಗಳಿರುವವರೊಡನೆ ವಿವಾಹ ಏರ್ಪಟ್ಟರೆ ಆ ಸಂಬಂಧದಿಂದ ಹುಟ್ಟುವ ಮಕ್ಕಳೂ ಉತ್ತಮಗುಣಗಳನ್ನು ಪಡೆಯುತ್ತಾರೆ. ಮನುವಿನ ಪ್ರಕಾರ ಧರ್ಮ ಬಿಟ್ಟವರು, ವೇದ ಕಲಿಯದವರು, ಗಂಡುಮಕ್ಕಳಿಲ್ಲದವರು, ದೇಹದ ಮೇಲೆ ಒರಟು ಕೂದಲುಳ್ಳವರು, ಹುಣ್ಣು, ಹೊಟ್ಟೆ ವ್ಯಾಧಿಗಳಿರುವವರು- ಇಂಥವರ ಮನೆಯಿಂದ ಹೆಣ್ಣನ್ನು, ಗಂಡನ್ನು ತರಕೂಡದೆಂಬ ಕಟ್ಟಿನ ಪದ್ಧತಿ ಇದ್ದಿತು. ಐಶ್ವರ್ಯಕ್ಕೆ ಬೆಲೆ ಕೊಡದೆ ಮೇಲೆ ಸೂಚಿಸಿದ ಅರ್ಹತೆ, ಅನರ್ಹತೆಗಳನ್ನು ಹೆಚ್ಚು ಗಮನಿಸುತ್ತಿದ್ದರು. ಸ್ಮೃತಿಯು ಈ ಬಗ್ಗೆ ಹೆಚ್ಚಿನ ವಿವರಗಳನ್ನು ಕೊಡುತ್ತದೆ: ಕೆಂಪು ಕೂದಲುಳ್ಳ, ರೋಗವುಳ್ಳ, ಕೆಂಪು ಕಣ್ಣುಗಳಿರುವ, ಕೀಳು ಸ್ವಭಾವದ, ಹೊಲಸು ಮಾತಾಡುವವರ, ಗಂಡುಸ್ವಭಾವದ, ಕಾಲಿನ ಮೇಲೆ ಕೂದಲಿರುವ, ದಪ್ಪ ಕಾಲುಗಳಿರುವ, ಅಣ್ಣತಮ್ಮಂದಿರು ಇಲ್ಲದ, ತಂದೆಯ ಊರು, ವಾಸಸ್ಥಳಗಳು ಗೊತ್ತಿಲ್ಲದ ಹೆಣ್ಣನ್ನು ವಿವಾಹವಾಗಕೂಡದು. ದೈಹಿಕ ನ್ಯೂನತೆಗಳಿಲ್ಲದ, ಹೊಂದಿಕೆಯ ಹೆಸರುಳ್ಳ, ಹಂಸ ಅಥವಾ ಆನೆಯ ನಡಿಗೆಯುಳ್ಳ, ದೇಹದ ಮೇಲೆ ವಿರಳವಾಗಿ ಕೂದಲುಳ್ಳ, ಸಣ್ಣ ಹಲ್ಲಿರುವ, ನಯವಾದ, ಸೂಕ್ಷ್ಮವಾದ ಕೈಗಳು, ಮುಂಗೈಗಳುಳ್ಳ, ಉತ್ತಮ ಕುಲದ, ಅತಿ ದೀರ್ಘೆಯಲ್ಲದ, ಅತಿ ಕುಬ್ಜೆಯಲ್ಲದ,

ಅತಿ ಕೃಷ್ಣ, ಗೌರವರ್ಣದವಳಲ್ಲದ, ತೋರ ಕುಚವಿಲ್ಲದ, ಗಂಡಿನ ವಯಸ್ಸಿಗೆ ಕಡಿಮೆಯಿರುವ ಪತಿವ್ರತೆಯರನ್ನು ವಿವಾಹವಾಗತಕ್ಕದ್ದೆಂದು ವಸಿಷ್ಠರು ತಿಳಿಸಿದ್ದಾರೆ. ಈ ಗುಣ-ಗಳಿರುವ ಹೆಣ್ಣು ಕೀಳುವರ್ಣದಲ್ಲಿ ಜನಿಸಿದರೂ ವಿವಾಹಕ್ಕೆ ಯೋಗ್ಯಳೆನಿಸಿದ್ದಳು.

ಅದೇ ಪ್ರಕಾರ ವರನ ಲಕ್ಷಣಗಳು ಹೀಗಿವೆ: ಕುತ್ತಿಗೆ, ಮಂಡಿಯ ಮೂಳೆ ಗಟ್ಟಿಯಿರುವ, ಕೂದಲು ಬಿಗಿಯಾಗಿರುವ, ಕತ್ತಿನ ಸುತ್ತಳತೆ ದಪ್ಪವಿರುವ, ತೊಡೆ ಚರ್ಮ ದಪ್ಪವಿರುವ, ನಡಿಗೆ ಮಾತು ಬಲಯುತವಾಗಿರುವ ಗಂಡನ್ನು ವಿವಾಹಕ್ಕೆ ಆರಿಸತಕ್ಕದ್ದು. ವಾತ್ಸಾಯನನು ಹೇಳುವಂತೆ ಈ ಅಂಶಗಳಲ್ಲಿ ಸಮಾನತೆ ಇರದಿದ್ದಲ್ಲಿ ಆ ವಿವಾಹವು ಮಿಶ್ರವಿರುವುದು. ಗಂಡು ತನ್ನ ಕಣ್ಣು ಮನಕ್ಕೆ ಒಪ್ಪಿದ ಹೆಣ್ಣನ್ನು ವಿವಾಹವಾದರೆ ಸುಖಪ್ರದವೆಂದು ವಾತ್ಸಾಯನನು ತಿಳಿಸಿದ್ದಾನೆ. ವಿವಾಹದಲ್ಲಿ ಅನುಸರಿಸಬೇಕಾಗಿದ್ದ ವಿಧಿಯನ್ನು ಆಶ್ವಲಾಯನಗೃಹ್ಯ-ಸೂತ್ರವು ವರ್ಣಿಸುತ್ತದೆ: ದೈಹಿಕ, ಲೈಂಗಿಕ ಸುಖಕ್ಕಾಗಿ ಮಾತ್ರವಲ್ಲದೇ ಧರ್ಮ, ಅರ್ಥ, ಕಾಮ, ಮೋಕ್ಷಗಳ ಸಾಧನೆಗೆ ಧರ್ಮವನ್ನನುಸರಿಸಿ ಜೀವನ ಸಾಗಿಸತಕ್ಕದ್ದೆಂದೂ, ವಿವಾಹವು ಒಂದು ಸಂಸ್ಕಾರವೆಂದೂ, ಒಪ್ಪಂದವಲ್ಲವೆಂತಲೂ ಶಾಸ್ತ್ರ-ಕಾರರು ತಿಳಿಸಿದ್ದಾರೆ. ಆದ್ದರಿಂದಲೇ ವಿವಾಹ ವಿಚ್ಛೇದನವು ಸುಲಭಸಾಧ್ಯವಾಗಿರಲಿಲ್ಲ. ನಾರದ ಪರಾಶರರ ಪ್ರಕಾರ ಗಂಡನು ದೇಶಾಂತರ ಹೋದರೆ, ನಪುಂಸಕನಾಗಿದ್ದರೆ, ತೀರಿ

ಕೊಂಡರೆ, ಪರಿವ್ರಾಜಕನಾದರೆ, ಪತಿತನಾದರೆ; ಅವಗುಣಿಯಾಗಿದ್ದರೆ, ಹೆಂಡತಿಯ ಜೀವನಕ್ಕೆ ಕಂಟಕ ತಂದೊಡ್ಡಿದರೆ, ವರ್ಣನಷ್ಟವಾದರೆ, ಮಕ್ಕಳಿಲ್ಲದಿದ್ದರೆ ಆ ಹೆಣ್ಣು ಮತ್ತೊಬ್ಬನನ್ನು ವಿವಾಹವಾಗಬಹುದಿತ್ತು. ಹೆಣ್ಣನ್ನು ಬಿಟ್ಟಿದ್ದ ಕಾಲದಲ್ಲಿ ಅವರ ಜ್ಞಾತಿಗಳು ಪೋಷಣೆ ಮಾಡತಕ್ಕದ್ದು. ವಿಚ್ಛೇದನಕ್ಕೆ ಪರಸ್ಪರ ಒಪ್ಪಿಗೆ ಬೇಕಿತ್ತು. ಬ್ರಹ್ಮ, ದೈವ, ಆರ್ಶ, ಪ್ರಾಜಾಪತ್ಯ ವಿವಾಹಗಳು ವಿಚ್ಛೇದನಕ್ಕೆ ಒಳಪಟ್ಟಿರಲಿಲ್ಲ. ಮಿತಾಕ್ಷರದ ಪ್ರಕಾರ ಗೃಹಸ್ಥಾಶ್ರಮ ಸ್ವೀಕರಿಸಿದವನು ಒಂಟಿಯಾಗಿರಕೂಡದು. ಹೆಂಡತಿ ತೀರಿಕೊಂಡರೆ, ಗಂಡು ಮಕ್ಕಳಾಗದಿದ್ದರೆ ಮತ್ತೊಬ್ಬಳನ್ನು ವಿವಾಹವಾಗಬಹುದಿತ್ತು. ಸ್ಮೃತಿಯ ಪ್ರಕಾರ ವಿಧವಾವಿವಾಹ ಒಪ್ಪಿಗೆಯಿರಲಿಲ್ಲ. ವಾತ್ಸಾಯನನು ಬಾಲ್ಯವಿವಾಹವನ್ನು ಒಪ್ಪಿಲ್ಲ. ಒಂದು ಗಂಡು ಮಗುವಾದನಂತರ ವಿವಾಹವು ಪೂರ್ಣವಾಗುತ್ತಿತ್ತು. ವಧುವಿನ ವಿಕ್ರಯವನ್ನು ಶಾಸ್ತ್ರಗಳು ಖಂಡಿಸಿವೆ.

## ಕುಟುಂಬ

ಪ್ರಾಚೀನ ಭಾರತದಲ್ಲಿಯ ಕುಟುಂಬಜೀವನವು ಬಹುಮಟ್ಟಿಗೆ ಗ್ರಾಮಜೀವನವಾಗಿತ್ತು. ಗ್ರಾಮಗಳಲ್ಲಿ ಸಮಷ್ಟಿ ಕುಟುಂಬಗಳು ಏರ್ಪಟ್ಟಿದ್ದವು. ಈ ಸಮಷ್ಟಿ ಕುಟುಂಬಗಳಿಂದ ಸಮಾಜಕ್ಕೆ ಅನೇಕ ಉಪಯೋಗಗಳೂ, ಸೌಲಭ್ಯಗಳೂ ದೊರೆತಿದ್ದವು. ಕೈಲಾಗದವರಿಗೆ ನೆರವು, ಸಂಪಾದನೆಯಾದ ಹಣದ ಒಟ್ಟುಗೂಡಿಸುವಿಕೆ, ಕೆಲಸ ಕಾರ್ಯಗಳ

ಹಂಚಿಕೆ, ಆಸ್ತಿಯ ಉತ್ತಮ ಉಪಯೋಗ, ಪ್ರತಿಯೊಬ್ಬರಿಗೂ ಉದ್ಯೋಗ ಕಲ್ಪಿಸಿಕೊಡುವುದು - ಈ ಸೌಕರ್ಯಗಳಿದ್ದವು. ಇತ್ತೀಚೆಗೆ ಆರ್ಥಿಕ ಕಾರಣಗಳಿಂದಲೂ, ಪಾಶ್ಚಾತ್ಯ ನಡೆನುಡಿಗಳ ಅನುಕರಣದಿಂದಲೂ, ಸಮಷ್ಟಿ ಕುಟುಂಬ ಒಡೆದುಹೋಗಿ ಛಿನ್ನವಾಗುತ್ತಿದೆ. ಮತ್ತೊಂದೆಡೆ, ಕೈಗಾರಿಕಾಕ್ಷೇತ್ರದಲ್ಲಿ ಮುಂದೆ ಹೋಗುತ್ತಿರುವುದರಿಂದ ಪಟ್ಟಣವಾಸ ಹೆಚ್ಚಾಗಿ ಹಳ್ಳಿಯ ವಾಸವು ಕಡಿಮೆಯಾಗುತ್ತಿದೆ. ಅಲ್ಲದೇ ವ್ಯವಸಾಯ ಕ್ಷೇತ್ರದಲ್ಲಿ ದುಡಿಯುವವರ ಸಂಖ್ಯೆಯು ಕ್ಷೀಣಿಸಿದೆ; ನೌಕರಿಯ ಚಾಪಲ್ಯ ಹೆಚ್ಚಾಗುತ್ತಿದೆ.

## ಸ್ತ್ರೀಯರ ಸ್ಥಾನ

ಸಮಾಜದಲ್ಲಿ ಸ್ತ್ರೀಯರ ಬಗ್ಗೆ ತೋರಿಸುವ ಪ್ರವೃತ್ತಿಯು ಮಹತ್ವದ್ದಾಗಿರುತ್ತದೆ. ಋಗ್ವೇದದಲ್ಲಿ ಗಂಡಹೆಂಡತಿಯರಿಗೆ ಧರ್ಮ ಹಾಗೂ ಸಂಸ್ಕಾರಗಳ ಆಚರಣೆಗೆ ಸಮಾನಸ್ಥಾನವನ್ನೇ ಹೇಳಿದೆ. ವೇದಗಳ ಕಾಲದಲ್ಲಿ ಅನೇಕ ಮಹಿಳೆಯರು ತತ್ವಶಾಸ್ತ್ರದಲ್ಲಿ ಪಾಂಡಿತ್ಯ ಪಡೆದಿದ್ದರು-ಏಶ್ವವಾರ, ಗೋಶಾ, ಲೋಪಾಮುದ್ರಾ ಇತ್ಯಾದಿ. ಸ್ತ್ರೀಯರು ಕೋಮಲಸ್ವಭಾವದವರಾದುದರಿಂದ ಗೃಹಕಾರ್ಯಗಳಲ್ಲಿಯೂ, ಗಂಡಸು ಒರಟುಸ್ವಭಾವದವನಾದುದರಿಂದ ಹೊರಗಿನ ಪ್ರಪಂಚದಲ್ಲಿಯೂ ಕಾರ್ಯ ಸಾಗಿಸಬೇಕೆಂದು ಸಾಮಾನ್ಯಭಾವನೆಯಿತ್ತು. ಆದರ್ಶಸ್ತ್ರೀಯ ಪರಿಚಯವನ್ನು ರಾಮಾಯಣ ಹಾಗೂ ಮಹಾಭಾರತ

ಕಾವ್ಯಗಳು ತಿಳಿಸುತ್ತವೆ. ಏಳಿಗೆ ಸಮೃದ್ಧಿಗಳ ರಾಣಿಯಾದ ಶ್ರೀಯು ಸತ್ಯವಂತೆಯೂ ನಿಸ್ಪೃಹಳೂ ಆದ ಸ್ತ್ರೀಯಲ್ಲಿ ವಾಸಿಸುವಳೆಂದು ನಂಬಿಕೆಯಿತ್ತು. ಮನುವು ಸ್ತ್ರೀಯರನ್ನು ತಂದೆ, ಅಣ್ಣ, ಗಂಡ, ಭಾವ, ಮೈದುನರು ಗೌರವಿಸಬೇಕೆಂದು ಹೇಳಿದ್ದಾನೆ. ಸ್ತ್ರೀಯರನ್ನು ಗೌರವಿಸಿದ ಸ್ಥಾನದಲ್ಲಿ ದೇವತೆಗಳು ವಾಸಿಸುವರೆಂದು ಹೇಳಿಕೆಯಿದೆ. ಹೆಂಗಸರನ್ನು ದುಃಖಪಡಿಸಿದರೆ ಆ ಕುಟುಂಬವು ಏಳಿಗೆಯಾಗುವದಿಲ್ಲವೆಂಬ ನಂಬಿಕೆಯೂ ಇದ್ದಿತು.

ಸ್ತ್ರೀಯು ಚುಂಬನ, ಆಲಿಂಗನಗಳಿಗೆ ಶುದ್ಧಳು ಎಂಬ ಭಾವನೆಯಿತ್ತು. ಸ್ತ್ರೀಯರು ಗಂಡಸರನ್ನು ಕಾಮಕ್ರೀಡೆಗಳಿಗೆ ಬಲವಂತಮಾಡುವ ಸ್ವಭಾವದವರೆಂದು ಮನುವು ಹೇಳಿರುವನು. ಆದ್ದರಿಂದ ತನ್ನ ಪತ್ನಿಯೊಬ್ಬಳನ್ನು ಉಳಿದು ಪರಸ್ತ್ರೀಯರಲ್ಲಿ ಸಂಬಂಧವಿಡಕೂಡದೆಂದು ಎಚ್ಚರಿಸಿದ್ದಾನೆ. ಅಂದರೆ, ಸ್ತ್ರೀಯರಿಗೆ ಮನುವು ಕೊಟ್ಟಿರುವ ಗೌರವ ಕಡಿಮೆಯೇನೂ ಅಲ್ಲ. ಮಗಳನ್ನು ಪ್ರೀತಿ ಆದರಗಳಿಂದ ಕಾಣಬೇಕು. ತಂದೆಗಿಂತಲೂ ತಾಯಿಗೆ ಗೌರವ ಹೆಚ್ಚು. ಆಕೆಗೆ ಗುರುವಿನ ಸಮಾನತೆ ದೊರೆಯುತ್ತಿತ್ತು. ತಾಯಿಯನ್ನು ಪೀಡಿಸದೆ ಪೋಷಣೆ ಮಾಡತಕ್ಕ ಕಾರ್ಯ ಮಗನದಾಗಿತ್ತು.

ಸ್ತ್ರೀಯು ಆಭರಣಗಳನ್ನು ಧರಿಸಿ ಗೃಹಲಕ್ಷ್ಮಿಯಂತೆ ಇರುವಳೆಂಬ ಭಾವನೆ ಇತ್ತು. ಸ್ತ್ರೀಯರು ಪೂಜಾರ್ಹರು.

ಆಶ್ರಯವಿಲ್ಲದ ಸ್ತ್ರೀಯರು, ಬಂಜೆಯರು, ಗಂಡುಮಕ್ಕಳಿಲ್ಲದವರು, ಮನೆಮಠಗಳಿಲ್ಲದವರು, ಹೀರಿಕೊಂಡ ಪತಿಯಲ್ಲಿ

ಶ್ರದ್ಧೆಯಿಟ್ಟ ವಿಧವೆಯರು, ರೋಗಗ್ರಸ್ತ ಸ್ತ್ರೀಯರು—ಇವರಿಗೆ ರಾಜನು ಆಶ್ರಯ ಕೊಡಬೇಕಿತ್ತು. ಅವರಿಗೆ ಬರಬೇಕಾಗಿದ್ದ ಆಸ್ತಿಯನ್ನು ಪರರು ತೆಗೆದುಕೊಂಡರೆ ರಾಜನು ಶಿಕ್ಷೆ ವಿಧಿಸ-ಬೇಕಿತ್ತು.

ಹೆಂಗಸರಿಗೂ ವಿದ್ಯಾಭ್ಯಾಸ ಕಡ್ಡಾಯವಾಗಿತ್ತು. ಆದರೆ ಶಿಕ್ಷಣಾಭ್ಯಾಸ ಹುಡುಗರಿಗೆ ಬ್ರಹ್ಮಚರ್ಯದಲ್ಲಿ ಹೇಳಿರುವಷ್ಟು ಕಠಿಣ ರೀತಿಯಲ್ಲಿರಲಿಲ್ಲ. ವಾನಪ್ರಸ್ಥ, ಸನ್ಯಾಸ ಸ್ತ್ರೀಯರಿಗೆ ಹೇಳಿಲ್ಲ. ಸ್ತ್ರೀಯರಿಗೆ ಪ್ರಧಾನಸ್ಥಾನ ಕೊಟ್ಟಿದ್ದರೆಂದು ಆಗಿನ ಕಾಲದಲ್ಲಿ ಸರ್ವರಿಗೂ ಹೆಸರುಗಳನ್ನಿಡುವ ರೀತಿಯಲ್ಲಿ ತಿಳಿಯ ಬಹುದು. ಉದಾಹರಣೆ: ಸೀತಾರಾಮ, ಲಕ್ಷ್ಮೀನಾರಾಯಣ, ಉಮಾಶಂಕರ, ಗಿರಿಜಾಶಂಕರ, ಲಕ್ಷ್ಮೀನರಸಿಂಹ, ಶ್ರೀನಿವಾಸ ಇತ್ಯಾದಿ.

## ವರ್ಣಧರ್ಮ

ವರ್ಣಧರ್ಮದ ಮೂಲ ಇತ್ಯಾದಿ ವಿಷಯಗಳು ಎಲ್ಲರಿಗೂ ತಿಳಿದಿದೆ. ಒಂದೇ ಮಾತಿನಲ್ಲಿ ಹೇಳಬಹುದಾದರೆ, "Honour and shame from no condition rise. Act well your part, there all the honour lies" ಎಂಬ ಅಲೆಗ್ಸಾಂಡರ್ ಪೋಪನ ವಾಣಿಗೆ ಅವಲಂಬಿಸಿದ್ದುದು ವರ್ಣಧರ್ಮ. ವ್ಯಕ್ತಿ ಹಾಗೂ ಒಟ್ಟು ಸಮಾಜ ವ್ಯವಸ್ಥೆಗೆ ಆಶ್ರಮ ಮತ್ತು ವರ್ಣಧರ್ಮ ಸಹಕಾರಿಯಾಗಿದ್ದವು.

ಕೌಶಿಕನೆಂಬ ಬ್ರಾಹ್ಮಣನು ವರ್ಣಧರ್ಮವನ್ನು ಧರ್ಮವ್ಯಾಧ ನಿಂದ ಕಲಿತನೆಂದು ಮಾರ್ಕಂಡೇಯ ಋಷಿಯು ಹೇಳಿರುವನು. ಮಿಥಿಲೆಯ ಧರ್ಮವ್ಯಾಧನು ಮಾಂಸವನ್ನು ಮಾರುತ್ತಿದ್ದರೂ ತನ್ನ ವರ್ಣದ ಧಾರ್ಮಿಕ ಕರ್ತವ್ಯವನ್ನು ಮಾಡುತ್ತಿದ್ದಾಗ್ಯೂ ಮಹಾಪಂಡಿತನಾಗಿದ್ದನು. ಆದ್ದರಿಂದ ಗುಣ ಪ್ರಧಾನವೇ ಹೊರತು ಜನ್ಮವಲ್ಲ. "Not by birth are the Brahmana, Kshatriya, Vaisya, Sudra and Mlechcha differentiated but by their respective qualities and deeds" (ಶುಕ್ರನೀತಿ).

ಮನುಷ್ಯರು ಯಾವ ಕಾರ್ಯ ನೆರವೇರಿಸುತ್ತಾರೋ ಅದು ಮುಖ್ಯ. ಜನ್ಮದ ಪರಿಣಾಮವಾಗಿ ಮಾಡುವ ಕೆಲಸಕ್ಕೆ ಮನ್ನಣೆಯಿಲ್ಲವೆಂದು ಗೊತ್ತಾಗಿದ್ದಿತು. ಪರಾಶರನ ಅಭಿಪ್ರಾಯವೂ ಇದೇ ಆಗಿದೆ. ಜನಕ ಮಹರ್ಷಿಯೂ ಇದೇ ಅಭಿಪ್ರಾಯವನ್ನು ಸಮರ್ಥಿಸಿರುವನು.

ಮನುಷ್ಯನ ವರ್ಣವನ್ನು ಅವನು ಮಾಡುವ ಕಾರ್ಯವ್ಯವಹಾರಗಳಿಂದ ನಿರ್ಧರಿಸುತ್ತಿದ್ದರು. ಜನಿಸುವ ಕುಟುಂಬ ಆಧಾರವಲ್ಲ. ವಿಶ್ವಾಮಿತ್ರ, ಪರಶುರಾಮ, ಗಾರ್ಗ್ಯ, ಶಂತನು ಸತ್ಯವತಿಯರ ವಿವಾಹ - ಇವು ಇದಕ್ಕೆ ಉದಾಹರಣೆಗಳು. ಭಗವದ್ಗೀತೆಯೂ ವರ್ಣಧರ್ಮದ ವಿಚಾರವಾಗಿ ಹೇಳುತ್ತ ಗುಣಕ್ಕೆ ಪ್ರಧಾನತೆಯನ್ನು ಹೇಳುತ್ತದೆ. ಸತ್ವಗುಣವನ್ನು ಪೂರ್ಣವಾಗಿ ಬೆಳಸಿಕೊಂಡು ಮೃತನಾದ ಮನುಷ್ಯನು ಹಿರಿದಾದ ಪುಣ್ಯಲೋಕವನ್ನು ಹೊಂದುತ್ತಾನೆ, ಎಂದು ಶ್ರೀಕೃಷ್ಣನು ಹೇಳಿದ್ದಾನೆ.

ಸಮಾಜಶಾಸ್ತ್ರಜ್ಞರು ಪ್ರಾಚೀನ ಅಥವಾ ಆಧುನಿಕ ಕಾಲಗಳಲ್ಲಿ ಸಮಾಜ ವರ್ಗೀಕರಣ ( Stratification in Society ) ನಡೆಯುತ್ತಲೇ ಇದೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಸಮಾಜ ಸ್ಥಿರವಾಗಿ ಏರ್ಪಡಬೇಕಾದರೆ ಯಾವು-ದಾದರೊಂದು ವಿಧವಾದ ವರ್ಗೀಕರಣ ಬೇಕೆಂತಲೂ ಅಭಿ-ಪ್ರಾಯಪಡುತ್ತಾರೆ. ಕ್ರಿ. ಶ. ೧೮ ನೇ ಶತಮಾನದವರೆಗೂ ಯುರೋಪಿನ ಅನೇಕ ರಾಜ್ಯಗಳಲ್ಲಿ 'ಎಸ್ಟೇಟ್ಸ್' ಎಂಬ ವರ್ಗಭೇದವಿತ್ತು. ಈಗಲೂ ಈ ರಾಜ್ಯಗಳಲ್ಲಿ ಒಂದು ತರಹ ವರ್ಗೀಕರಣ ಕಂಡುಬರುತ್ತದೆ. ಮೇಲ್ಮಟ್ಟದ, ಮಧ್ಯಮ, ಕೆಳಮಟ್ಟದ-ಮೂರು ವರ್ಗಗಳು ಯಾವ ದೇಶದಲ್ಲಾದರೂ, ಯಾವ ರೀತಿಯಲ್ಲಾದರೂ ಕಂಡುಬರುತ್ತವೆ. ಪ್ರಪಂ-ಚದ ಇತಿಹಾಸದಲ್ಲಿ ವರ್ಗಗಳಿಲ್ಲದ, ವರ್ಗದ್ವೇಷ ಗಳಿಲ್ಲದ ಸಮಾಜವು ಇಲ್ಲವೇ ಇಲ್ಲವೆಂದು ಹೇಳಬಹುದು. ವರ್ಗಗಳು ಬದಲಾವಣೆ ಹೊಂದುತ್ತಿರುತ್ತವೆ; ಜಾತಿ ಕಟ್ಟು-ನಿಟ್ಟಿನಿಂದ ಕೂಡಿರುತ್ತದೆ. ವರ್ಗಭೇದ ಸಹಜವಾಗಿಯೇ ಆಗುತ್ತದೆ. ಕಾರಣವೇನಂದರೆ ಮನುಷ್ಯರ ಸ್ವಭಾವ, ಪ್ರವೃತ್ತಿ, ಬುದ್ಧಿಶಕ್ತಿ, ವಿಶೇಷಶಕ್ತಿ, ವ್ಯಕ್ತಿತ್ವ—ಇವುಗಳಲ್ಲಿ ಮನುಷ್ಯರಿಗೆ ತಾರತಮ್ಯವಿದ್ದೇ ಇದೆ. ಸಮತಾ ಭಾವನೆಯನ್ನು ಎಷ್ಟರಮಟ್ಟಿಗೆ ಆಚರಣೆಗೆ ತಂದರೂ, ಒಬ್ಬ ಮನುಷ್ಯನಿಗೂ ಮತ್ತೊಬ್ಬನಿಗೂ ವ್ಯತ್ಯಾಸವಿದ್ದೇ ಇರುತ್ತದೆ. ಸಮಾಜದಲ್ಲಿ ಒಂದೇ ಸ್ವಭಾವ-ವುಳ್ಳ, ಮನೋಪ್ರವೃತ್ತಿಯುಳ್ಳ ಜನರು ಒಟ್ಟಿಗೆ ಸೇರಿ ತಮ್ಮ ತಮ್ಮದೇ ಆದ ವರ್ಗವನ್ನು ಮಾಡಿಕೊಳ್ಳುವುದು ಸಹಜ-

ವಾಗಿದೆ. ಒಂದೇ ವೃತ್ತಿಯನ್ನು ಅನುಸರಿಸುತ್ತಿರುವ ಜನರಲ್ಲಿ ವರ್ಗ ಭಾವನೆ ಬೇಗನೆ ಬಂದುಬಿಡುತ್ತದೆ. ಆಯಾ ವರ್ಗದ ವೃತ್ತಿ ಕರ್ತವ್ಯಗಳನ್ನು ಅನುಸರಿಸಿ ಇತರ ವೃತ್ತಿ, ವ್ಯವಹಾರ ಗಳಿಗೆ ಮನಸ್ಸು ಕೊಡದಿದ್ದರೆ ಸಮಾಜದಲ್ಲಿ ಬಿಗಿ ಅಥವಾ ಸ್ಥಿರತೆ ಬರಬಹುದು. ಸಮಾಜದ ಅಭಿವೃದ್ಧಿ ಆಗಲೇಬೇಕು; ಈ ಅಭಿವೃದ್ಧಿಗೆ ದಕ್ಷರಾದ ಜನರು ಅವಶ್ಯ ಬೇಕು. ಹೀಗೆ ಸಮಾಜದಲ್ಲಿ ಸ್ಥಾನ ತಾರತಮ್ಯ ಉಂಟಾಗಿ ಆಯಾ ಸ್ಥಾನಕ್ಕೆ ತಕ್ಕವರನ್ನು ಆರಿಸುವ ಅಥವಾ ನಿಯಮಿಸುವ ಪದ್ಧತಿ ಬರುತ್ತದೆ.

ಪ್ರಾಚೀನ ಭಾರತದಲ್ಲಿ ಆರ್ಥಿಕ ಮನ್ನಣೆ, ಅತ್ಯಂತ ಸುಖಮಯವಾದ ಜೀವನ—ಇವನ್ನು ಯಾವ ವರ್ಗದವರೂ ಆಶಿಸುತ್ತಿರಲಿಲ್ಲ. ಸರಳ ಜೀವನ, ಒರಟು ಬಟ್ಟೆ, ಸರಳವಾದ ಆಹಾರ, ಪ್ರಶಾಂತ ಜೀವನವೇ ಅವರ ಧ್ಯೇಯವಾಗಿತ್ತು. ವರ್ಣಪದ್ಧತಿಯ ಅತಿ ಮುಖ್ಯ ಲಕ್ಷಣವೆಂದರೆ ಪ್ರತಿ ವರ್ಣಕ್ಕೂ ನಿರ್ದಿಷ್ಟವಾದ ಕರ್ತವ್ಯಗಳಿದ್ದು ಸಮಾಜ ಸೇವೆಗಾಗಿ ದುಡಿ-ಯುವ ಭಾವನೆ ಇದ್ದಿತೇ ಹೊರತು—ಹಣ, ಆರ್ಥಿಕ ಸ್ಥಿತಿ, ವಿದ್ಯೆ, ಅಧಿಕಾರ ಇವುಗಳನ್ನನುಸರಿಸಿ ವರ್ಣಪದ್ಧತಿ ಏರ್ಪಟ್ಟಿರ-ಲಿಲ್ಲ. ಆರ್ಥಿಕ ಪ್ರಪಂಚದಲ್ಲಿಯೂ ಹಣ ಒಂದೇ ವರ್ಣ-ದಲ್ಲಿ ಕೇಂದ್ರೀಕೃತವಾಗದಂತೆ ವರ್ಣಧರ್ಮ ಏರ್ಪಟ್ಟಿದ್ದಿತು. ಪಾಶ್ಚಾತ್ಯ ದೇಶಗಳ ಸಮಾಜ ವರ್ಗೀಕರಣಕ್ಕೂ ಭಾರತದ ಸಮಾಜ ವರ್ಗೀಕರಣಕ್ಕೂ ಕಂಡುಬಂದಿರುವ ತಾರತಮ್ಯ ಇದೊಂದೇ. ಹಣಕ್ಕೆ ಪ್ರಾಧಾನ್ಯ ಕೊಟ್ಟು ಪಾಶ್ಚಾತ್ಯ ಜನರು

ವರ್ಗೀಕರಣ ಮಾಡಿಕೊಂಡಿದ್ದರು. ಆದರೆ ಪ್ರಾಚೀನ ಭಾರತ-ದಲ್ಲಿ ಕರ್ತವ್ಯಗಳನ್ನು ನೆರವೇರಿಸಿ ಸಮಾಜಕ್ಕೆ ತಮ್ಮ ತಮ್ಮ ಸೇವಾ ಭಾಗವನ್ನು ನೆರವೇರಿಸುವುದರಲ್ಲಿ ವರ್ಣಪದ್ಧತಿ ಏರ್ಪಟ್ಟಿದ್ದಿತು. ಸತ್ಯಾಂಶವನ್ನು ಮನಗಂಡರೆ, ಎಲ್ಲರೂ ಶೂದ್ರರಾಗಿ ಜನಿಸಿ ತಮ್ಮ ತಮ್ಮ ದಕ್ಷತೆಯಿಂದ ಕೂಡಿದ ಕರ್ತವ್ಯ, ನಿಸ್ವಾರ್ಥ ಸೇವೆಗಳಿಂದ ಮೇಲ್ಪಟ್ಟದ ವರ್ಣವನ್ನು ಹೊಂದುತ್ತಿದ್ದರು; ಜನ್ಮಕ್ಕೆ ಯಾವ ತರದ ಸಂಬಂಧವೂ ಇರಲಿಲ್ಲ.

ಇಂದಿನ ಭಾರತದಲ್ಲಿ ಜನ್ಮಕ್ಕೂ ವ್ಯಕ್ತಿಗೂ ಕೊಟ್ಟಿರ ತಕ್ಕಂಥ ಪ್ರಾಮುಖ್ಯ ಅಳಿದು ಹೋಗಬೇಕು. ಕರ್ತವ್ಯಗಳಲ್ಲಿ ಅಯ್ಕೆ ಅಥವಾ ಗುಣಗಳನ್ನು ಅವಲಂಬಿಸಿ ವರ್ಗಗಳು ಏರ್ಪಡ-ಬೇಕು. ಹೀಗೆ ಏರ್ಪಡಬಹುದಾದ ವರ್ಗಗಳಲ್ಲಿ ಸ್ಥಾನಮಾನ, ಹಕ್ಕುಗಳು, ಹಣ ಶೇಖರಣೆ, ಅಧಿಕಾರ ಶೇಖರಣೆ ಇರಕೂಡದು. ಕೆಲವೇ ಉದ್ಯೋಗ, ವೃತ್ತಿಗಳಿಗೆ ಕೊಡುವ ಗೌರವ, ಮನ್ನಣೆ ಹೋಗಬೇಕು. ಎಲ್ಲಾ ವೃತ್ತಿಗಳಿಗೂ ಸಮಾನವಾದ ಗೌರವ ದೊರೆಯಬೇಕು. ಗುಣ, ದಕ್ಷತೆ, ಶಕ್ತಿ ಇರತಕ್ಕಂಥ ವ್ಯಕ್ತಿ-ಗಳಿಂದ ಸಮಾಜಕಾರ್ಯ ನಡೆಯಬೇಕು. ಈ ಕಾರ್ಯದಲ್ಲಿ 'ಕುಲ' ಅಥವಾ 'ಹುಟ್ಟು' ಮಧ್ಯೆ ಬರಕೂಡದು. ಈ ದೊಡ್ಡ ಕಾರ್ಯ ನೆರವೇರಿಸುವುದಕ್ಕೆ ವಿದ್ಯೆ, ಪೌರರ ಹೊಣೆಗಾರಿಕೆ, ದೇಶದ ತಾತ್ಕಾಲಿಕ ಪರಿಸ್ಥಿತಿ—ಈ ವಿಚಾರಗಳ ಪ್ರಸಾರ ಅತಿ ಮುಖ್ಯವೂ ಉಪಯುಕ್ತವೂ ಆಗಿದೆ.

ಕೆಲವರ ಅಭಿಪ್ರಾಯದಂತೆ ಈಗಾಗಲೇ ಮೂರು ವರ್ಗಗಳು ಕಾಣಬರುತ್ತವೆ: ಪ್ರಾಪಂಚಿಕ ಸುಖ, ಸಂತೋಷ, ತೃಪ್ತಿ ಬೇಕಾದವರು, ಫಲ ತೆಗೆದುಕೊಂಡು ಕರ್ತವ್ಯ ಮಾಡುತ್ತಿರುವವರು ಮತ್ತು ಫಲಾಕಾಂಕ್ಷೆಯಿಲ್ಲದೆ ದುಡಿಯುತ್ತಿರುವವರು. ಕಡೆಯ ಗುಂಪು ವಿರಳ.

## ಆದರ್ಶ ವ್ಯಕ್ತಿಗಳ ಉದಾತ್ತ ಜೀವನ ರೀತಿ

ಪ್ರಾಚೀನ ಭಾರತದ ಇತಿಹಾಸ, ಸಂಸ್ಕೃತಿ, ತತ್ವಶಾಸ್ತ್ರ ಸಿದ್ಧಾಂತ- ಇತ್ಯಾದಿಗಳ ಹಿರಿಮೆಯನ್ನೂ ಆಯಾ ಕಾಲದ ವಿಚಾರಸರಣಿ, ಮನೋವೃತ್ತಿಯನ್ನೂ ಅಂದಿನ ಮಹಿಮಾವಂತರಾದ ಪುರುಷರೂ, ಸ್ತ್ರೀಯರೂ ತಮ್ಮ ಜೀವನರೀತಿ, ಕಾರ್ಯಗಳಿಂದ ತೋರ್ಪಡಿಸಿದ್ದಾರೆ. ವೇದಗಳ ಕಾಲದ ಸಂಸ್ಕೃತಿಯ ಪ್ರತೀಕವೆನಿಸಿರುವವರು ಯಾಜ್ಞವಲ್ಕ್ಯರು. ಭಾರತದ ಸಂಸ್ಕೃತಿಯನ್ನು ವ್ಯಕ್ತಪಡಿಸುವವರಲ್ಲಿ ಈತನು ಅತ್ಯಂತ ಹಿರಿಯ. ಬುದ್ಧಿಪ್ರಾಧಾನ್ಯವಾದ ಯುಗದ ಮಹಾ ಪುರುಷನು. ಈತನಿಗೆ ಸಮಾಜ ಋಣಿಯಾಗಿದೆ. ಏಕೆಂದರೆ ಈತನು ಸಾಹಿತ್ಯ ಉಪನಿಷತ್ತುಗಳ ಜ್ಞಾನ, ಅರಿವು ಇವುಗಳನ್ನು ನಿರೂಪಿಸಿರುವ ಮಹಾವ್ಯಕ್ತಿ. ಹಿಂದೂ ತತ್ವಶಾಸ್ತ್ರ ಸಿದ್ಧಾಂತಗಳ ಪಿತಾಮಹನೆನಿಸಿರುವನು. ಮತ್ತೊಬ್ಬ ಆದರ್ಶ ವ್ಯಕ್ತಿ ಗೌತಮ ಬುದ್ಧ. ಐಶ್ವರ್ಯ, ಅಧಿಕಾರಗಳ ನೆಲೆಯಲ್ಲಿ ಹುಟ್ಟಿದರೂ, ಅರಣ್ಯಗಳಲ್ಲಿ ಸಂಚರಿಸಿ ತಪಸ್ಸನ್ನಾಚರಿಸಿ, ಸರ್ವವನ್ನೂ ತ್ಯಾಗಮಾಡಿ ಪ್ರಪಂಚಕ್ಕೆ, ಜನತೆಗೆ, ನವೀನ

ತತ್ವಶಾಸ್ತ್ರ ಸಿದ್ಧಾಂತ ಸ್ವರೂಪವನ್ನು ತೋರಿಸಿದನು. ಪ್ರಪಂಚದ ಇಡೀ ಜನಾಂಗಕ್ಕೆ ಮಾರ್ಗದರ್ಶಿಯಾಗಿರುವ ತತ್ವವನ್ನೂ, ಉಪನಿಷತ್ತು ಬೌದ್ಧಮತ ಸಾರಿವೆ. ಬುದ್ಧನನ್ನು ಒಂಬತ್ತನೆಯ ಅವತಾರವೆಂದೂ ಪರಿಗಣಿಸಿರುವರು. ಅನಂತರ ಅಶೋಕ ಮೌರ್ಯನು ಚಕ್ರವರ್ತಿ ಶ್ರೇಷ್ಠನು. ರಾಜ್ಯ ಸರಕಾರ—ಯಾವ ರೂಪದಲ್ಲೇ ರಚಿತವಾಗಿರಲಿ (ಅರಸೊತ್ತಿಗ, ಪ್ರಜಾಪ್ರಭುತ್ವ, ಸರ್ವಾಧಿಕಾರ ಇತ್ಯಾದಿ) ಆಡಳಿತದಲ್ಲಿ ಆದರ್ಶಗಳನ್ನೂ, ಧರ್ಮ (ಕರ್ತವ್ಯ) ನಿಯಮಗಳನ್ನೂ ಅನುಷ್ಠಾನಕ್ಕೆ ಹೇಗೆ ತರಬಹುದೆಂಬ ಮಾರ್ಗದಲ್ಲಿ ಅಶೋಕನು ಏಕಮಾತ್ರ ವ್ಯಕ್ತಿಯಾಗಿದ್ದು ಮಾದರಿ ಹಾಕಿಕೊಟ್ಟಿರುವನು. ನ್ಯಾಯ, ಧರ್ಮ ಹಾಗೂ ಪ್ರೀತಿಯ ಅಡಿಗಲ್ಲಿನ ಮೇಲೆ ಇವನು ಸಾಮ್ರಾಜ್ಯವನ್ನು ಕಟ್ಟಿದನು. ಕಳಿಂಗ ಯುದ್ಧದಲ್ಲಿ ಜಯ ಲಭಿಸಿದನಂತರ ಯುದ್ಧವನ್ನೇ ತ್ಯಜಿಸಿದ ಮಹಾತ್ಮರಲ್ಲಿ ಏಕೈಕ ಪುರುಷನು. ಯುರೋಪ್, ಆಫ್ರಿಕಾ, ಚೈನಾ, ಜಪಾನ್ ದೇಶಗಳಿಗೆ ರಾಯಭಾರಿಗಳನ್ನು ಕಳುಹಿಸಿ ಶಾಂತಿ ಸಂದೇಶವನ್ನು ಸಾರಿದ ಅದ್ವಿತೀಯ ವ್ಯಕ್ತಿ. ಅನಾಗರಿಕರು ಮತ್ತು ಹಿಂದುಳಿದ ಜನರನ್ನು ಸಹ ಏಳಿಗೆಯ ಸ್ಥಿತಿಗೆ ತಂದನು. ಪ್ರಾಣಿಕೋಟಿಗಳಿಗೂ ಆತನ ಸೇವೆ ಅಗಾಧವಾಗಿದ್ದು ಭಾರತೀಯ ರಾಜಕೀಯ ಪದ್ಧತಿ, ಸಾಂಸ್ಕೃತಿಕ ಪ್ರಸಾರಗಳಿಗೆ ರತ್ನಪ್ರಾಯನಾಗಿದ್ದನು. ಶಾಂತಿಯುತ ವಾತಾವರಣದಲ್ಲಿ ಸ್ಥಾಪಿಸಿದ ಸಾಮ್ರಾಜ್ಯಸತ್ತೆಯು ಬಹು ವರ್ಷಕಾಲ ನಡೆಯ-ಬಲ್ಲುದೆಂದೂ, ಮಾನವನ ದ್ವೇಷಾಸೂಯೆಗಳ, ಕಲಹಗಳ

ಮೇಲೆ ಕಟ್ಟಿದ ಸಾಮ್ರಾಜ್ಯಸತ್ತೆ ಬಹು ಬೇಗ ನಶಿಸಿ ಹೋಗುವು-
ದೆಂದೂ ತಲೆತಲಾಂತರಕ್ಕೂ ಸಮರ್ಥನೆ ಮಾಡಿ ತೋರಿಸು-
ವುದು ಅಶೋಕನ ಸಾಮ್ರಾಜ್ಯ. ಈ ಕಿರುಹೊತ್ತಿಗೆಯಲ್ಲಿ
ಸೂಚಿಸಿರುವ ಕಾಲಕ್ಕಿಂತ ಕೆಲವು ವರ್ಷಗಳ ನಂತರ ಸ್ಥಾಪಿ-
ಸಲ್ಪಟ್ಟಿದ್ದ ವಿಜಯನಗರ ಸಾಮ್ರಾಜ್ಯವೂ ಈ ಧ್ಯೇಯಗಳನ್ನೇ
ಹೊಂದಿದ್ದಿತು. ವಿಜಯನಗರದ ಜನರು ಎಷ್ಟರ ಮಟ್ಟಿನ
ಏಳಿಗೆ, ಅಭ್ಯುದಯ ಸ್ಥಿತಿಯಲ್ಲಿದ್ದರೆಂದು ಡಾ॥ ಸಾಲೆತೊರೆ
ಯವರು Social and Political Life in Vijayanagar,
ಡಾ॥ ಪಿ. ಬಿ. ದೇಸಾಯಿ ಅವರು ' ವಿಜಯನಗರ ಸಾಮ್ರಾಜ್ಯ '
ಎಂಬ ಗ್ರಂಥಗಳಲ್ಲಿ ವರ್ಣಿಸಿದ್ದಾರೆ. ನೆರೆಹೊರೆಯ ರಾಜ್ಯಗಳನ್ನು
ಸಾರ್ವಭೌಮತ್ವ ಸ್ಥಾಪನೆಯ ಆಶೆಯಿಂದ ಗೆದ್ದರೂ ಅವು-
ಗಳನ್ನು ಹಿಂತಿರುಗಿ ಕೊಟ್ಟು ಸ್ನೇಹಮಯವಾದ ಸಾಮ್ರಾಜ್ಯ
ಕಟ್ಟಿದವರಲ್ಲಿ ಸಮುದ್ರಗುಪ್ತನು ದೊಡ್ಡವನು. ಇಡಿ ಕ್ಷಾತ್ರ
ಧರ್ಮಕ್ಕೆ ಆದರ್ಶಪ್ರಾಯನಾಗಿ ಸಾಹಿತ್ಯ, ಕಲೆ, ಸಂಗೀತಕ್ಕೆ
ಉತ್ತೇಜನ ಕೊಟ್ಟನು. ಯುದ್ಧದಲ್ಲಿಯೂ, ಆಡಳಿತದಲ್ಲಿಯೂ
ಹಿರಿಯನೆನಿಸಿದ ಮತ್ತೊಬ್ಬ ವ್ಯಕ್ತಿ ಶ್ರೀ ಹರ್ಷ. ಈತನು
ಸಾಹಿತಿಯೂ, ನಾಟಕಕರ್ತನೂ ಆಗಿದ್ದನೆಂಬುದು ಎಲ್ಲರಿಗೂ
ತಿಳಿದ ವಿಷಯವಾಗಿದೆ.

ಆದರ್ಶ ಸ್ತ್ರೀಯರಿಗೂ ಭಾರತವು ವಿಖ್ಯಾತವಾಗಿತ್ತು.
ರಾಮಾಯಣದಲ್ಲಿ ಚಿತ್ರಿಸಲ್ಪಟ್ಟಿರುವ ಸೀತಾದೇವಿಯ ಪಾತ್ರ
ಆದರ್ಶ ಸ್ತ್ರೀತ್ವಕ್ಕೇ ಮಾರ್ಗದರ್ಶಿಯಾಗಿದೆ. ಪತಿವ್ರತಾ

ಶಿರೋಮಣಿಯರಾದ ಅಹಲ್ಯಾ, ದ್ರೌಪದಿ, ತಾರಾ, ಮಂಡೋ-
ದರಿಯರ ಜತೆಗೆ ಸೀತೆಯೂ ಒಬ್ಬಳು.

ಸೇವಾದೃಷ್ಟಿಯಿಂದ ಹನುಮಂತನೂ, ಪ್ರತಿಜ್ಞಾ ಪರಿ-
ಪಾಲನೆಗೆ ಭೀಷ್ಮಾಚಾರ್ಯರೂ, ಕರ್ತವ್ಯಪರಿಪಾಲನೆಗೆ
ಲಕ್ಷ್ಮಣನೂ, ಸ್ವಾಭಿಮಾನ ಛಲಗಳಿಗೆ ದುರ್ಯೋಧನನೂ-
ಹೀಗೆ ಹಲವಾರು ಆದರ್ಶವ್ಯಕ್ತಿಗಳು ನಮ್ಮ ದೇಶದ ಸಂಸ್ಕೃ
ತಿಯ ಸಂಕೇತವೇ ಆಗಿದ್ದು ನಮಗೆ ಈಗಲೂ ಮಾರ್ಗದರ್ಶಕ-
ರಾಗಿದ್ದಾರೆ.

## ದೇವಾಲಯಗಳು

ಅತ್ಯಂತ ಪುರಾತನ ಕಾಲದಲ್ಲಿ ದೇವಾಲಯಗಳು
ಇದ್ದಂತೆ ಕಂಡುಬರುವುದಿಲ್ಲ. ಮನೆಯಲ್ಲಿಯೇ ದೇವರ ಪೂಜೆಗೆ
ಪ್ರತ್ಯೇಕ ಕೋಣೆಗಳಿದ್ದವು; ಭಾರತೀಯ ಸಂಸ್ಕೃತಿಯಲ್ಲಿ
ಸಾಮೂಹಿಕ ಪ್ರಾರ್ಥನೆಯು ಕಂಡುಬರುವುದಿಲ್ಲ. ಭಜನೆ,
ಕೀರ್ತನೆ ಇವು ಇತ್ತೀಚಿನವು. ಮೌರ್ಯರ ಕಾಲದಿಂದೀಚೆಗೆ
ವಿಗ್ರಹಗಳನ್ನು ಮಾಡಿ ಪೂಜಿಸುವ ಪದ್ಧತಿ ಪ್ರಾರಂಭವಾಯಿ-
ತೆಂದು ಹೇಳಬಹುದು. ಮೃತರ ಸಮಾಧಿಯ ಮೇಲೆ
ವಿಗ್ರಹವನ್ನಾಗಲಿ ಲಿಂಗವನ್ನಾಗಲಿ ಸ್ಥಾಪಿಸಿ, ಚೈತ್ಯ, ಸ್ತೂಪ
ಗಳನ್ನು ಕಟ್ಟುವ ಪದ್ಧತಿಯೂ ಇದೆ. ಆದರೆ ಸಾಮಾನ್ಯವಾಗಿ
ದೇವಾಲಯವು ರಾಜನ ಅಥವಾ ಪಂಗಡದ ಮುಖಂಡನ
ಮನೆಯಲ್ಲಿ ರಚಿಸಲ್ಪಟ್ಟಿತ್ತೆಂದು ಕಂಡುಬರುತ್ತದೆ.

ಗುಹೆಗಳಲ್ಲಿ ದೇವಾಲಯಗಳನ್ನೂ ವಿಶೇಷವಾಗಿ ನಿರ್ಮಿ-ಸಿದ್ದಾರೆ. ಇದರ ಉದ್ದೇಶ ವೇದೋಕ್ತಿಯಂತೆ - "ದೇಹೋ-ದೇವಾಲಯಃ ಪ್ರೋಕ್ತೋ ಜೀವೋದೇವಸ್ಸನಾತನಃ". ಮನುಷ್ಯದೇಹವೇ ದೇವಾಲಯ, ಜ್ಯೋತಿಸ್ವರೂಪನಾದ ಈಶ್ವರನೇ ಜೀವ ಅಥವಾ ಆತ್ಮ. "ದೇವಾಲಯಗಳು ಈಶ್ವರನ ಬಾಹ್ಯ ಸೃಷ್ಟಿಯನ್ನೂ ಮಾನವನ ದೇಹರಚನೆಯನ್ನೂ ಜೀವದ ಪ್ರತಿರೂಪವನ್ನೂ ವಾಸ್ತುಶಿಲ್ಪದಲ್ಲಿ ಭಕ್ತನಿಗೆ ಜ್ಞಾಪಿಸುವುದಕ್ಕಾಗಿ ನಿರ್ಮಿತವಾಗಿವೆ."

ದೇವಾಲಯಗಳು ಸಾಮಾಜಿಕ ಚಟುವಟಿಕೆಗಳ ಕೇಂದ್ರಗಳೂ ಆಗಿದ್ದವು. ವಿದ್ಯಾಭ್ಯಾಸ, ಕಲೆ, ಆರ್ಥಿಕ ವ್ಯವ-ಹಾರಗಳು, ಚುನಾವಣೆ, ರೋಗಚಿಕಿತ್ಸೆ ಮತ್ತು ಸಮಾಜಸೇವೆಯ ದೃಷ್ಟಿಯಿಂದಲೂ ದೇವಾಲಯಗಳು ಪ್ರಮುಖವಾಗಿದ್ದವು. ಪ್ರತಿ ದೇವಾಲಯದಲ್ಲಿ ಆಡಳಿತಕ್ಕಾಗಿ ನಿಯಮಿತವಾದ ಸಿಬ್ಬಂದಿ ಇತ್ತು. ನಾಟ್ಯ, ಬಯಲಾಟ, ಉಪನ್ಯಾಸಗಳು, ನೀತಿಬೋಧೆ ನೆರವೇರುತ್ತಿದ್ದವು. ಉತ್ಸವಗಳು ಜರುಗುತ್ತಿದ್ದವು. ವಾಸ್ತುಶಿಲ್ಪವೂ ಅಭಿವೃದ್ಧಿಗೆ ಬಂದಿತು. ದೇವಾಲಯಗಳಲ್ಲಿ ದವಸಧಾನ್ಯ ಶೇಖರವಾಗು-ತ್ತಿದ್ದವು. ಯುದ್ಧಕಾಲದಲ್ಲಿ ಶರಣಾಗತರಿಗೂ, ಸೈನಿಕರಿಗೂ ಆಶ್ರಯ ಸಿಗುತ್ತಿತ್ತು. ಸರಕಾರಕ್ಕೆ ಆರ್ಥಿಕ ಕೊರತೆ ಉಂಟಾದಾಗ ಶ್ರೀ ಭಂಡಾರದಿಂದ ಹಣಸಹಾಯವಾಗು-ತ್ತಿತ್ತು. ಭಾರತ ಸಂಸ್ಕೃತಿಯ ಚಟುವಟಿಕೆಗಳ ನೆಲೆಮನೆ-ದೇವಾಲಯಗಳು. ಈ ಚಟುವಟಿಕೆಗಳು ಭಾರತದಲ್ಲಿ

ಮಾತ್ರವೇ ಅಲ್ಲದೆ ಜಾವಾ, ಸುಮಾತ್ರಾ, ಬಲಿ, ಬರ್ಮಾ, ಕಾಂಬೋಡಿಯಾ ದ್ವೀಪಗಳಲ್ಲಿಯೂ ಪ್ರಸಾರವಾಗಿದ್ದವು.

## ಹಬ್ಬ - ಉತ್ಸವಗಳು

ಪ್ರಾಚೀನ ಭಾರತದ ಸಮಾಜಜೀವನದಲ್ಲಿ ಹಬ್ಬ, ಉತ್ಸವಗಳು ಅತಿ ಮುಖ್ಯ ಪಾತ್ರ ವಹಿಸಿದ್ದವು. ಋತುಗಳು ಒಂದೊಂದಾಗಿ ಬದಲಾವಣೆಯಾದಾಗೆಲ್ಲಾ ಆಯಾ ಕಾಲಕ್ಕೆ ತಕ್ಕಂತೆ ಮನರಂಜನೆ ಮತ್ತು ಸುಖಸಂತೋಷಗಳಿಗಾಗಿ ಒಪ್ಪುವಂತಹ ಹಬ್ಬಗಳನ್ನು ನೆರವೇರಿಸುತ್ತಿದ್ದರು. ಲಿಚ್ಛವಿ ಗುಂಪಿನವರು ಒಟ್ಟಾಗಿ ಸಬ್ಬರತ್ತಿ ವರ್ಸ ಎಂಬ ಹಬ್ಬವನ್ನು ಆಚರಿಸುತ್ತಿದ್ದರೆಂದು ಸಂಯುಕ್ತನಿಕಯದಲ್ಲಿ ಹೇಳಿದೆ. ಪುರಾ-ತನ ಗ್ರಂಥಗಳಲ್ಲಿ ಕಾಲಕ್ಕನುಗುಣವಾಗಿ, ವಸಂತೋತ್ಸವವನ್ನು ಆಚರಿಸುತ್ತಿದ್ದರೆಂದು ಉಕ್ತವಾಗಿದೆ. ದೀಪಾವಳಿ ಹಬ್ಬವು ಅತಿ ವೈಭವಯುಕ್ತವಾದದ್ದು. ಈ ಹಬ್ಬವನ್ನು ಜೈನರ ಪ್ರಕಾರ ಮಹಾವೀರನ ನಿರ್ವಾಣದ ಸಮಯದಲ್ಲಿದ್ದ ೧೮ ದೊರೆಗಳು ಹೊತ್ತಿಸಿದ ದೀಪವೆಂತಲೂ, ಹಿಂದೂ ಕಥೆಗಳ ಪ್ರಕಾರ ಶ್ರೀರಾಮನು ವನವಾಸ ಮುಗಿಸಿ ಬಂದನಂತರ ಆರಂಭವಾದುದೆಂದೂ ಪ್ರತೀತಿ ಇದೆ. ಯಾದವರು ಗಿರಿಪೂಜಾ ಎಂಬ ಹಬ್ಬವನ್ನು ಆಚರಿಸುತ್ತಿದ್ದರು. ನವರಾತ್ರಿಹಬ್ಬ, ದುರ್ಗಾಪೂಜೆ, ಗಣೇಶನ ಹಬ್ಬ, ಚಾತುರ್ಮಾಸದ ನಿಯಮಗಳು, ಕಾರ್ತಿಕ ಮಾಸದ ಲಕ್ಷದೀಪೋತ್ಸವ, ರಾಮನವಮಿ—ಹೀಗೆ ಸಣ್ಣದರಿಂದ

ಅತಿ ವಿಜೃಂಭಣೆ, ನಿಯಮದಿಂದ ಆಚರಿಸಲ್ಪಡುವ ದೊಡ್ಡ
ದೊಡ್ಡ ಹಬ್ಬ ಉತ್ಸವಗಳು ಹೇರಳವಾಗಿದ್ದವು. ಅವುಗಳಲ್ಲಿ
ಅನೇಕ ಹಬ್ಬ, ಉತ್ಸವಗಳು, ರಥೋತ್ಸವಗಳೂ, ಜಾತ್ರೆಗಳೂ
ಈಗಲೂ ನಡೆದು ಬಂದಿವೆ.

## ಸಾಹಿತ್ಯ

ಅತ್ಯಂತ ಪುರಾತನ ಕಾಲದಲ್ಲಿ ಏಶ್ಯಾ, ಚೈನಾ ದೇಶಗ
ಳಿಂದ ಹಲವಾರು ಮಂದಿ ಹಿಮಾಲಯವನ್ನು ದಾಟಿಕೊಂಡು
ಬಂದು ಭಾರತದಲ್ಲಿ ನೆಲೆಸಿದರು. ಆರ್ಯರು ಬಂದ ವೇಳೆಯಲ್ಲಿ
ದ್ರಾವಿಡರು ಇಲ್ಲಿ ವಾಸವಾಗಿದ್ದರು. ಸಂಸ್ಕೃತ ಭಾಷೆ ಮತ್ತು
ಬೌದ್ಧ ಗ್ರಂಥಗಳು ಬರೆಯಲ್ಪಟ್ಟಿರುವ ಪಾಲಿ ಭಾಷೆ ಭಾರತಕ್ಕೆ
ಐಕಮತ್ಯ ಒದಗಿಸಿತ್ತು. ಮೊಟ್ಟಮೊದಲು ನಾಲ್ಕು ವೇದಗಳು
ಸಂಸ್ಕೃತ ಭಾಷೆಯಲ್ಲಿ ರಚಿಸಲ್ಪಟ್ಟವು. ನಂತರ ಬ್ರಾಹ್ಮಣ,
ಆರಣ್ಯಕ, ಉಪನಿಷತ್ತು, ಸ್ಮೃತಿ, ಸೂತ್ರ, ಪುರಾಣಗಳು,
ಮಹಾಕಾವ್ಯಗಳು, ವ್ಯಾಕರಣ, ಭಾಷ್ಯ ಬರೆಯಲ್ಪಟ್ಟವು.
ಕ್ರಿ. ಪೂ. ೮ ನೆಯ ಶತಮಾನದಲ್ಲಿ ಯಾಸ್ಕನು ನಿರುಕ್ತವನ್ನು
ಬರೆದನು. ಅಶೋಕನ ಶಾಸನಗಳು ಖರೋಷ್ಟಿ ಮತ್ತು ಬ್ರಾಹ್ಮೀ
ಲಿಪಿಯಲ್ಲಿ ಕಲ್ಲುಬಂಡೆಗಳ ಮೇಲೆ ಬರೆಯಲ್ಪಟ್ಟವು.

ಕ್ರಿ. ಪೂ. ೮ ನೆಯ ಶತಮಾನದಲ್ಲಿ ಧರ್ಮಶಾಸ್ತ್ರ, ಇತಿಹಾಸ
ಪುರಾಣಗಳು ಬರೆಯಲ್ಪಟ್ಟವು. ಧರ್ಮಶಾಸ್ತ್ರಗಳನ್ನು ಬರೆ
ದವರು ಮನು, ವಿಷ್ಣು, ಯಾಜ್ಞವಲ್ಕ್ಯ, ನಾರದ ಮೊದಲಾದ-
ವರು. ಸೂತ್ರಗಳೆಂದರೆ ಶ್ರೌತ, ಗೃಹ್ಯ, ಮತ್ತು ಧರ್ಮ.

ಕ್ರಿ. ಪೂ. ೪೦೦–೨೦೦ ರಲ್ಲಿ ಮಹಾಭಾರತವೂ, ಕ್ರಿ. ಪೂ. ೨೦೦ ರಿಂದ ಕ್ರಿ. ಶ. ೨೦೦ ರಲ್ಲಿ ರಾಮಾಯಣವೂ ಬರೆಯಲ್ಪಟ್ಟವು. ಈ ಮಹಾ ಕಾವ್ಯಗಳು ಸಮಾಜವನ್ನು ವರ್ಣಿಸುವುವಲ್ಲದೇ ಆದರ್ಶಗಳನ್ನೂ, ಆದರ್ಶ ವ್ಯಕ್ತಿಗಳನ್ನೂ ಚಿತ್ರಿಸಿವೆ. ಮಹಾಭಾರತದಲ್ಲಿ ಒಂದು ಭಾಗ ಭಗವದ್ಗೀತೆ. ಶ್ರೀಕೃಷ್ಣನು ಅರ್ಜುನನಿಗೆ ಹೇಳಿದ ಮಾತುಗಳು ಇಡೀ ಮಾನವ ಪ್ರಪಂಚಕ್ಕೆ ಉಪದೇಶವಾಗಿ, ಸಂಕೇತರೂಪದಲ್ಲಿ ಚಿತ್ರಿಸಲ್ಪಟ್ಟಿವೆ. ನಂತರ ಬೌದ್ಧ ಗ್ರಂಥಗಳಾದ ತ್ರಿಪಿಟಕ, ಜಾತಕ, ದೀಪವಂಶ, ಮಹಾವಂಶ ಮುಖ್ಯವಾದವು. ಕೌಟಿಲ್ಯನು ಅರ್ಥಶಾಸ್ತ್ರವನ್ನೂ, ಪತಂಜಲಿಯು ಮಹಾಭಾಷ್ಯವನ್ನೂ, ಭರತ ಮುನಿಯು ನಾಟ್ಯಶಾಸ್ತ್ರವನ್ನೂ, ಕಾಲಿದಾಸನು ರಘುವಂಶ, ಕುಮಾರ ಸಂಭವ, ಮೇಘದೂತ, ಮಾಲವಿಕಾಗ್ನಿಮಿತ್ರ, ಶಾಕುಂತಲ ಎಂಬ ಗ್ರಂಥಗಳನ್ನೂ ವಿಶಾಖದತ್ತನು ಮುದ್ರಾರಾಕ್ಷಸವನ್ನೂ, ಶೂದ್ರಕನು ಮೃಚ್ಛಕಟಿಕವನ್ನೂ, ವಿಷ್ಣುಶರ್ಮನು ಪಂಚತಂತ್ರವನ್ನೂ, ಅಮರಸಿಂಹನು ಅಮರ ಕೋಶವನ್ನೂ, ಬಾಣನು ಹರ್ಷಚರಿತೆಯನ್ನೂ ರಚಿಸಿದರು. ಕ್ರಿ.ಶ.೮ ನೆಯ ಶತಮಾನದಲ್ಲಿ ಶ್ರೀ ಶಂಕರನು ತಮ್ಮ ಭಾಷ್ಯವನ್ನೂ, ಮಧ್ವಾಚಾರ್ಯರು ರಾಮಾನುಜಾಚಾರ್ಯರು ತಮ್ಮ ತತ್ವಸಿದ್ಧಾಂತಗಳನ್ನೂ, ಉತ್ತರ ಭಾರತದಲ್ಲಿ ಚೈತನ್ಯ, ಕಬೀರ್ ಮೊದಲಾದವರೂ, ಕರ್ನಾಟಕದಲ್ಲಿ ಬಸವಣ್ಣನವರೂ, ಅಕ್ಕಮಹಾದೇವಿಯೂ, ಸರ್ವಜ್ಞಕವಿಯೂ, ಹರಿದಾಸ ಕೀರ್ತನಕಾರರೂ ತಮ್ಮ ತಮ್ಮ ಅಮೂಲ್ಯ ಗ್ರಂಥಗಳನ್ನೂ ರಚಿಸಿ ನಮಗೆ ಅನುಗ್ರಹಿಸಿದ್ದಾರೆ.

ದಕ್ಷಿಣದಲ್ಲಿ ಶೈವ ನಯುಮರ್, ವೈಷ್ಣವ ಆಳ್ವಾರುಗಳು ತಿರುಯರೈ (ನಂಬಿ ಆಂಡಾಲ್ ನಂಬಿ) ಮಾಣಿಕ ವಾಚರ್, ತಿರುವಾಚಕರ್ ಇವರುಗಳ ಮತ್ತು ನಾಥಮುನಿಯ ನಳಯೀರ ಪ್ರಬಂಧವು ಪ್ರಸಿದ್ಧವಾಗಿವೆ.

ಕಥಾಪ್ರಪಂಚದಲ್ಲಿ ಬೃಹತ್ಕಥೆಯು ಪ್ರಸಿದ್ಧವಾಗಿದೆ. ಅದರ ಕಥೆಗಳು ದೇಶ ವಿದೇಶಗಳಿಗೂ ವ್ಯಾಪಿಸಿ ಅರೇಬಿಯನ್ ನೈಟ್ಸ್, ಬೊಕಾ ಚಿಯೋ ಕಥೆಗಳು, ಚಾಸರನ ಕಥೆಗಳು ಕೊನೆಗೆ ಷೇಕ್ಸ್‌ಪಿಯರನ ನಾಟಕಗಳಿಗೂ ಸಾಮಗ್ರಿಗಳನ್ನು ಒದಗಿಸಿದೆ. ಪ್ರಾಚೀನ ಭಾರತದ ಅತ್ಯುತ್ತಮ ಕಥೆಗಳ ಭಂಡಾರ ಬೃಹತ್ಕಥೆ.

ಸಮಾಜದ ದುಶ್ಚಟಗಳು, ದುರಭ್ಯಾಸಗಳ ಪರಿಣಾಮ-ಗಳನ್ನು ಕಥಾಸರಿತ್ಸಾಗರದಲ್ಲಿ ಕಾಣಬಹುದು. ಶತ್ರುಗಳಿಂದ ದೇಶಕ್ಕೆ ತಲೆದೋರುವ ಭೀತಿಯ ನಿವಾರಣೆ ಎಷ್ಟರಮಟ್ಟಿಗೆ ಮುಖ್ಯವೋ ಅಷ್ಟೇ ಒಳದೇಶದ ಪ್ರಜೆಗಳಲ್ಲಿ ದುರ್ಜನರು, ಮೂರ್ಖರು, ಮೋಸಗಾರರು – ಇವರಿಂದ ಕೆಡುಕುಂಟಾಗದೆ ಶಾಂತಿಯ ಪಾಲನೆ ಮುಖ್ಯ.

ಚಾಸರನು ತನ್ನ ಸಾಹಿತ್ಯದಲ್ಲಿ ಹೇಗೆ ೩೯ ಪಾತ್ರ ಪರಿ-ಚಯ ಮಾಡಿಕೊಡುವ ವೇಳೆಯಲ್ಲಿ ಇಡೀ ಸಮಾಜವನ್ನೇ ಚಿತ್ರಿಸಿರುವನೋ, ಹೇಗೆ ನಯವಾದ ಮೃದುವಾದ ಹಾಸ್ಯ ಲಹರಿಯಿಂದ ಜನರ ಮನಸ್ಸಿನ ಮೇಲೆ ಎಚ್ಚರಕೊಟ್ಟು ಪ್ರಭಾವ ಬೀರಿದ್ದಾನೋ ಹಾಗೆ ಪ್ರಾಚೀನಭಾರತದ ಗ್ರಂಥಗಳೂ

ಅದರಲ್ಲೂ ಕಥೆಗಳು ಇಡೀ ಮಾನವಕೋಟಿಯನ್ನೇ ಚಿತ್ರಿಸಿ ಉಪಯುಕ್ತವೆನಿಸಿವೆ.

ಪ್ರಾಚೀನ ಭಾರತದ ಗ್ರಂಥ ಭಂಡಾರವು ಈಗಿನ ಸಾಹಿತ್ಯಗಳಲ್ಲಿ ವರ್ಣಿತವಾಗಿರುವ ವಿಚಾರ ಸರಣಿಗೆ ಆಧಾರವಾಗಿದೆ-ಯೆಂದು ಹೇಳಿದರೆ ತಪ್ಪಾಗಲಾರದು.

## ಧರ್ಮ

ಪ್ರಾಚೀನ ಭಾರತದ ಜನರು ಸದಾ ಪರಲೋಕ ಮನಸ್ಕ-ರಿದ್ದರೆಂತಲೂ ಪ್ರಾಪಂಚಿಕ ವಿಷಯಗಳಿಗೆ ಮನಸ್ಸು ಕೊಟ್ಟಿರ-ಲಿಲ್ಲವೆಂತಲೂ ಆಕ್ಷೇಪವಿದೆ. ಆದರೆ ಇದು ಸತ್ಯವಲ್ಲ. ಅವರು ಪರಲೋಕ ಚಿಂತನೆಯಲ್ಲಿ, ಅಂದರೆ, ಸರ್ವದಾ ಧರ್ಮ ವಿಚಾರದಲ್ಲಿ ನಿರತರಾಗಿದ್ದರು. ಆತ್ಮಗುಣವೇ ಧರ್ಮದ ಸಾರ. ಎಲ್ಲಾ ಧರ್ಮಾಚರಣೆಗಳಲ್ಲಿ ದಯೆಯೇ ಮೂಲವಾಗಿರುತ್ತದೆ. ಆದ್ದ-ರಿಂದಲೇ ಬುದ್ಧನಿಂದ ಹಿಡಿದು ಬಸವಣ್ಣನವರೆಗೆ ಎಲ್ಲಾ ಧರ್ಮ ಪ್ರಚಾರಕರೂ, ಧರ್ಮಸ್ಥಾಪಕರೂ, ಧರ್ಮಗ್ರಂಥಕಾರರೂ "ದಯೆಯೇ ಧರ್ಮದ ಮೂಲವಯ್ಯಾ" ಎಂದು ಹೇಳಿದ್ದಾರೆ. "ದೀನರಲ್ಲಿ ತೋರಿದರೆ ದಯೆ, ಕಿರಿಯರಲ್ಲಿ ತೋರಿದರೆ ಪ್ರೀತಿ, ಸರಿಕರಲ್ಲಿ ತೋರಿದರೆ ಸ್ನೇಹ, ಹಿರಿಯರಲ್ಲಿ ತೋರಿದರೆ ಗೌರವ, ಗುರುಗಳಲ್ಲಿ ತೋರಿದರೆ ಭಕ್ತಿ, ಗಂಡನಲ್ಲಿ, ಹೆಂಡತಿಯಲ್ಲಿ ತೋರಿದರೆ ಪ್ರಣಯ" —ಎಲ್ಲಾ ಒಂದೇ. ವಸ್ತು ಒಂದು, ರೂಪ ಹಲವು. ಈ ನಂಬಿಕೆ ಸರ್ವಸಾಮಾನ್ಯ-

ವಾಗಿ ಎಲ್ಲರಲ್ಲೂ ನೆಲಸಿತ್ತು. ಈ ಸಂಬಿಕೆ, ಆಚರಣೆಗಳಿಂದ ಪ್ರಾಪಂಚಿಕ ಕಷ್ಟಗಳನ್ನು ತಗ್ಗಿಸಿಕೊಳ್ಳುವ ಸಾಧನವನ್ನವರು ಅರಿತಿದ್ದರು. ಆದರೆ ಈಗಿನ ಅರ್ಥಪ್ರಧಾನವಾದ, ಯಂತ್ರ ಪ್ರಧಾನವಾದ ಅಣುಬಾಂಬಿನ ಯುಗದಲ್ಲಿ ಜನರಿಗೆ ಮಾನಸಿಕ ನೆಮ್ಮದಿಯೇ ಇಲ್ಲದೆ ಒಂದು ತೆರನಾದ ತೊಳಲುವಿಕೆ, ಆತಂಕ, ಕಷ್ಟಕಾರ್ಪಣ್ಯಗಳು ತಲೆದೋರಿವೆ. ಈ ಬದಲಾವಣೆಗೆ ಧಾರ್ಮಿಕ ಮತ್ತು ನೈತಿಕ ನಿಷ್ಠೆಗಳನ್ನು, ಅವುಗಳಲ್ಲಿ ನಂಬಿಕೆಯನ್ನು ಬಿಟ್ಟಿ-ರುವುದೇ ಕಾರಣವಾಗಿದೆ. ನಾವು ಹಿಂದಿನವರಿಗಿಂತ ನಾಗರಿಕರಾ-ಗಿದ್ದೇವೆ. ವಿಜ್ಞಾನದ ಬೆಳವಣಿಗೆಯಿ ಜೀವನಸ್ಥಿತಿ ಉತ್ತಮ ವಾಗಿದೆ. ನಾಗರಿಕತೆ ಪ್ರಾಪಂಚಿಕ ಜೀವನ ರೀತಿಗೆ ಸಂಬಂಧಿಸಿದ್ದು. ಆದರೆ ಆತ್ಮದ ಉನ್ನತಿಯನ್ನು ತಿಳಿಸುವುದು ಸಂಸ್ಕೃತಿ. "ಸಂಸ್ಕೃತಿ ಎಂದರೆ ಮನುಷ್ಯನ ನೈಸರ್ಗಿಕವಾದ ಉತ್ತಮ ಗುಣಗಳನ್ನು ವಿಂಗಡಿಸಿ ಅವುಗಳನ್ನು ಪುಷ್ಟೀಕರಿಸಿ ದೋಷದ ಕಳೆಗಳನ್ನು ಸಾಧ್ಯವಾದ ಮಟ್ಟಿಗೆ ಕಿತ್ತು ಅವನನ್ನು ಕ್ರಮೇಣ ದೈವೀಸಂಪತ್ತಿ-ಗೇರಿಸುವುದು".

## ಕಲೆ ಹಾಗೂ ವಿಜ್ಞಾನ

ನೂಲುವದು, ನೆಯ್ಗೆ, ಉಣ್ಣೆಬಟ್ಟೆಯ ಕೆಲಸ, ಮರಗೆಲಸ, ಗಾಡಿ ರಥಗಳ ತಯಾರಿಕೆ, ಕಬ್ಬಿಣ ಕೆಲಸ, ಬಂಗಾರದ ಕೆಲಸ, ದ್ಧ ಸಾಮಗ್ರಿಗಳ ತಯಾರಿಕೆ, ಜೇಡಿ-ಮಣ್ಣಿನ ನಯವಾದ ಕೆಲಸ, ಮೆರುಗಿನ ಕೆಲಸ, ಗೊಂಬೆ ಕೆಲಸ, ಚಿಪ್ಪು, ಮೂಳೆ, ದಂತದ ಕೆಲಸ, ಕೆತ್ತನೆಯ ಕೆಲಸ, ಚರ್ಮದ ಕೆಲಸ—ಇವು ಹಿಂದಿನ ಕಾಲದ ಜನರ ನಿತ್ಯ

ಜೀವನದ ಕಸಬುಗಳಾಗಿದ್ದವು. ಸಂಗೀತ ಕಲೆಗೆ ಪ್ರಾಧಾನ್ಯ-
ವಿತ್ತು. ಗುಹೆಗಳಲ್ಲಿ ದೇವಾಲಯಗಳನ್ನು ಕೊರೆಯುತ್ತಿದ್ದರು.
ವ್ಯಾಪಾರ, ವಾಣಿಜ್ಯದಿಂದ ವಿಶೇಷ ಹಣ ಶೇಖರಣೆಯಾಗು-
ತ್ತಿತ್ತು. ಮೌರ್ಯ ಯುಗದಲ್ಲಿ ವಾಣಿಜ್ಯ ಶ್ರೇಷ್ಠಿ-
ಗಳೂ, ಬೌದ್ಧ ಚೈತ್ಯಾಲಯಗಳ ಕೊರೆಯುವಿಕೆಯೂ
ಏರ್ಪಟ್ಟವು. ಸಾರನಾಥದಲ್ಲಿರುವ ಅಶೋಕನ ಸ್ತಂಭ
ಪ್ರಸಿದ್ಧವಾಗಿದೆಯಲ್ಲದೆ ಭಾರತ ಸರ್ಕಾರದ ಲಾಂಛನವೂ
ಆಗಿದೆ. ದಕ್ಷಿಣದಲ್ಲಿ (ಮಹಾಬಲಿಪುರದಲ್ಲಿ) ಶಿಲ್ಪಕಲೆ
ಅಭಿವೃದ್ಧಿಗೆ ಬಂದಿತು. ಗುಹಾಂತರ ದೇವಾಲಯಗಳಿಗೆ
ಎಲ್ಲೋರದ ಕೈಲಾಸ ಗುಹೆ ಪ್ರಸಿದ್ಧವಾಗಿದೆ. ಕಲೆಯ ಅಭಿ-
ವೃದ್ಧಿಗೆ ರಾಜರ ಆಶ್ರಯ, ಉತ್ತೇಜನವೇ ಕಾರಣವಾಗಿತ್ತು.

ಕಲೆಯ ಜತೆಗೆ ವಿಜ್ಞಾನವೂ ಬೆಳೆದಿತ್ತು. ದೆಹಲಿಯಲ್ಲಿ-
ರುವ ಕಬ್ಬಿಣ ಸ್ತಂಭ ಮತ್ತು ಕಲ್ಲಿನ ಕುದುರೆ (ಕೋನಾರ್ಕ್)
ಇತ್ಯಾದಿಗಳನ್ನು ನೋಡಿದರೆ ಲೋಹದ ಕೆಲಸ, ಅದರ ವಿಜ್ಞಾನ
ತಿಳಿದಿತ್ತೆಂದು ಗೊತ್ತಾಗುತ್ತದೆ. ಖಗೋಳ ಶಾಸ್ತ್ರ, ಗಣಿತ
ಶಾಸ್ತ್ರ, ಜ್ಯೋತಿಷ್ಯ, ತತ್ವಶಾಸ್ತ್ರ, ವ್ಯಾಕರಣ, ಛಂದಸ್ಸು,
ವೈದ್ಯಶಾಸ್ತ್ರಗಳಲ್ಲಿ ಪರಿಶ್ರಮ ಪಡೆದಿದ್ದ ಮಹಾಜ್ಞಾನಿಗಳು
(ಆರ್ಯಭಟ್ಟ, ವರಹಮಿಹಿರ, ಚರಕ, ಶುಶ್ರುತ ಇತ್ಯಾದಿ)
ಅನೇಕ ಸಂಖ್ಯೆಯಲ್ಲಿದ್ದರು.

## ವೇಶ್ಯೆಯರು

ಪ್ರಾಚೀನ ಭಾರತದ ಸಮಾಜದಲ್ಲಿ ವೇಶ್ಯೆಯರಿಗೂ
ಸ್ಥಾನವಿತ್ತು. ಇವರು ರಾಜರ ಆಸ್ಥಾನದಲ್ಲಿ ಮಂಗಳ ದ್ರವ್ಯ-

ಗಳನ್ನು ಹಿಡಿದು ರಾಜರಿಗೆ ಅಂಗರಕ್ಷಕರಾಗಿಯೂ ಇರುತ್ತಿದ್ದರು. ಚಂದ್ರಗುಪ್ತಮೌರ್ಯನಿಗೆ ಸ್ತ್ರೀಯರು ಅಂಗರಕ್ಷಕರಾಗಿದ್ದರು. ಹರ್ಷನು ಪ್ರಯಾಣ ಮಾಡುವ ಸಮಯದಲ್ಲಿ ಸ್ತ್ರೀಯರು ಆನೆಗಳ ಮೇಲೆ ಕುಳಿತು ಹಿಂಬಾಲಿಸುತ್ತಿದ್ದರು. ವೇಶ್ಯೆಯರು ದೇವಾಲಯಗಳಲ್ಲಿ ವಂಶಪರಂಪರೆಯಾಗಿ ಸೇವೆ ಮಾಡುತ್ತಿದ್ದರು. ದಕ್ಷಿಣದಲ್ಲಿ ವೇಶ್ಯೆಯರು ಸಂಗೀತ ನಾಟ್ಯದಲ್ಲಿ ನುರಿತು ಸೇವೆ ಸಲ್ಲಿಸುತ್ತಿದ್ದರು. ಅನೇಕ ವೇಶ್ಯೆಯರು ವಿದ್ಯಾವಂತರೂ, ಕವಿಗಳೂ ಆಗಿದ್ದರು. ವೇಶ್ಯೆಯರು ಗೌರವಸ್ಥರಾಗಿದ್ದರು. ತಮ್ಮ ಕಲಾ ಕೌಶಲ್ಯಪ್ರದರ್ಶನಗಳಿಂದ ಉತ್ಸವ ದಿನಗಳಲ್ಲಿ ಕಳೆ ಕಟ್ಟುತ್ತಿದ್ದರು.

## ಅಂತ್ಯಜರು

ಉಪನಿಷತ್ತುಗಳ ಪ್ರಕಾರ ದುಷ್ಕರ್ಮವಾಡಿದವರು ಅಂತ್ಯಜರಾಗಿ ಹುಟ್ಟುತ್ತಾರೆಂಬ ಹೇಳಿಕೆ ಇವೆ. ಇವರು ಅಸ್ಪೃಶ್ಯರಲ್ಲ. ಅಸ್ಪೃಶ್ಯತಾ ಭಾವನೆ ಹಿಂದಿನ ಕಾಲದಲ್ಲಿರಲಿಲ್ಲ. ಪ್ರಾಚೀನ ಭಾರತದಲ್ಲಿ ಅಂತ್ಯಜರನ್ನು ಚಂಡಾಲರೆಂದು ಕರೆಯುತ್ತಿದ್ದರು. ಅವರಿಗೆ ಸೌಕರ್ಯಗಳೂ ಕಲ್ಪಿತವಾಗಿದ್ದವು: ರಾಜಮಾರ್ಗಗಳು, ವಿಷ್ಣುಸನ್ನಿಧಿಯಾತ್ರೆ, ವಿವಾಹ, ಯಜ್ಞ, ಉತ್ಸವ, ಸಂಗ್ರಾಮ, ಅಗ್ನಿಭಯವಿದ್ದಕಡೆ ಅಸ್ಪೃಶ್ಯತೆಯಿರಲಿಲ್ಲ. ಹರಿಜನರು ಭೈರವಪೂಜೆ ಮಾಡುತ್ತಿದ್ದರು. ಗುಪ್ತರ ಕಾಲದಲ್ಲಿ ಅವರಿಗೆ ಕೆಲವು ಪ್ರತಿಬಂಧಕಗಳಿದ್ದವು. ಆದರೆ ಹರ್ಷನ ಕಾಲಕ್ಕೆ ಅವು ಹೋಗಿದ್ದವು.

ಅಂತ್ಯಜರಾಗಿದ್ದು ಲೋಕಮಾನ್ಯತೆಯನ್ನು ಸಂಪಾದಿಸಿ-ದವರಲ್ಲಿ ನಂದನಾರ್ ಮೊದಲಾದ ಶಿವಭಕ್ತರು, ಆಳ್ವಾರುಗಳು ಕನಕದಾಸರು ಮುಖ್ಯರು. ಶ್ರೀ ಶಂಕರರು, ಜ್ಞಾನಿಯಾದವನು ಚಂಡಾಲನಾಗಲಿ, ದ್ವಿಜನಾಗಲಿ, ಗುರುವೆಂದು ಹೇಳಿದ್ದಾರೆ. ಶ್ರೀ ರಾಮಾನುಜರು, ವೀರಶೈವ ಶರಣರು. ಹರಿದಾಸ ಕೂಟ-ದವರು, ಸ್ಪೃಶ್ಯಾಸ್ಪೃಶ್ಯ ನಿಯಮಗಳನ್ನು ಲೆಕ್ಕಿಸಲಿಲ್ಲ. 'ಊರ ಹೊರಗಿನವನು ಹೊಲೆಯನಲ್ಲ, ದುಷ್ಕರ್ಮ ಮಾಡಿದವನು ನಿಜವಾದ ಹೊಲೆಯ" ಎಂದು ಸಾರಿದರು. ಹೊಲಗೇರಿಯ ಹೊಲೆಯರಿಗಿಂತ ಸಮಾಜದಲ್ಲಿ ದುರ್ಮಾರ್ಗಿಗಳು, ದುರಾಚಾರಿಗಳು ನಿಜವಾದ ಹೊಲೆಯರೆಂದು ಬಸವಣ್ಣನವರ ಅಭಿಪ್ರಾಯ. ಒಂದೇ ವರ್ಣದವರ ದುರಭಿಮಾನವನ್ನು ಖಂಡಿಸಿದರು. ಇತ್ತೀಚೆಗೆ ಈ ಅಸ್ಪೃಶ್ಯತಾ ಭಾವನೆ ಶಾಸನದ ಮೂಲಕ ನಶಿಸಿ ಹೋಗುತ್ತಿದೆ.

## ಚೋರರು

ಯಾವಕಾಲದ ಸಮಾಜದಲ್ಲಿಯಾಗಲಿ ಬಗೆಬಗೆಯಾದ ಜನರಿರುತ್ತಾರೆ. ಧರ್ಮನಿರತರಾದವರ ಜತೆಗೆ ನಾನಾವಿಧವಾದ ಜನರ ಪರಿಚಯವನ್ನು ಗ್ರಂಥಗಳು ಮಾಡಿಕೊಡುತ್ತವೆ. ಮಧ್ಯಮ ವರ್ಗದವರು, ವರ್ತಕರು, ಪುಟ್ಟಪುಟ್ಟ ರಾಜರು ಕಂಡು ಬರುತ್ತಾರೆ, ನಿಸ್ಪೃಹರ ಜತೆಗೆ ಮೋಸಗಾರರೂ, ವಿಟರೂ, ಜೂಜುಗಾರರು, ಮೂರ್ಖರು, ಪೋಲಿಗಳು,

ಪಟಿಂಗರು, ಭೂತಪ್ರೇಶಾಚಿಗಳೂ, ನಾಗರೂ, ವರ್ಣಿಸಲ್ಪಟ್ಟಿದ್ದಾರೆ. ಚಪಲ ಚಂಚಲ ಚಿತ್ತರು, ದುಷ್ಟರು, ನೀಚರು, ಪೊಂಡರು, ಜಗಳಗಂಟಿಗರು —ಇವರೂ ಇದ್ದರು. ಮಾಯಾ ಮಂತ್ರ ಬಲ್ಲವರು, ದ್ರೋಹಿಗಳು, ಕೋಪಿಷ್ಟರಾದ ಅತ್ತೆ, ಹೆಂಡತಿಯರು, ಮಲತಾಯಿ, ಕೆಟ್ಟಚಾರಿತ್ರ್ಯವಿದ್ದವರೂ ವರ್ಣಿತರಾಗಿದ್ದಾರೆ. ಹಾಗೆಯೇ ಪತಿವ್ರತಾ ಶಿರೋಮಣಿಯರೂ, ಆದರ್ಶ ವ್ಯಕ್ತಿಗಳೂ ಚಿತ್ರಿತವಾಗಿದ್ದಾರೆ.

## ಆರ್ಥಿಕ ಸ್ಥಿತಿ

ಪ್ರಾಚೀನ ಭಾರತದಲ್ಲಿಯ ಸಾಮಾಜಿಕ ವ್ಯವಸ್ಥೆಯ ಪರಿಣಾಮವಾಗಿ ಜನರ ಆರ್ಥಿಕ ಸ್ಥಿತಿ ಉತ್ತಮವಾಗಿತ್ತು. ಇದಕ್ಕೆ ಆಗಿನ ಕಾಲದ ರಾಜ್ಯಪದ್ಧತಿಯೂ ಸಹಾಯಕವಾಗಿತ್ತು. ಬಿಡಿಸಲಾಗದ ಸಮಸ್ಯೆಗಳು ಆಗ ಇರಲಿಲ್ಲ. ಯಾವೊಂದು ಕಾಲದಲ್ಲೂ ಕ್ಷಾಮ ಮತ್ತು ಆರ್ಥಿಕ ಮುಗ್ಗಟ್ಟು ಕ್ರಿ. ಶ. ೮ ನೆ ಶತಮಾನದವರೆಗೂ ಕಂಡುಬರುವುದಿಲ್ಲ. ಏಕೆಂದರೆ ಹಣವು ರಾಷ್ಟ್ರಾಭಿವೃದ್ಧಿ ಕಾರ್ಯಗಳಿಗೆ ವಿನಿಯೋಗವಾಗುತ್ತಿತ್ತು. ಕರವು ಸರ್ವರ ಯೋಗಕ್ಷೇಮಕ್ಕೆ ಉಪಯೋಗವಾಗುತ್ತಿತ್ತು.

ಕ್ರಿ. ಪೂ. ೬ನೆಯ ಶತಮಾನದಲ್ಲಿ ಉದ್ಯಮಿಗಳು, ವ್ಯಾಪಾರಸ್ಥರು, ತಮ್ಮ ತಮ್ಮ ಶ್ರೇಷ್ಠಿಗಳನ್ನು ಸ್ಥಾಪಿಸಿ, ಒಳ ಮತ್ತು ಹೊರನಾಡಿನ ವ್ಯಾಪಾರ ನಡೆಸುವುದರಲ್ಲಿ ನಿರತರಾಗಿದ್ದರು. ವಿಶೇಷ ಹಣ ದೇಶಕ್ಕೆ ಬರುತ್ತಿತ್ತು. ಜನರು ಸುಖದಿಂದಲೂ, ನೆಮ್ಮದಿಯಿಂದಲೂ ಇದ್ದರು.

## ಮುಖ್ಯಾಂಶಗಳು

ಗುಪ್ತರ ಕಾಲದಲ್ಲಿ ಆರ್ಥಿಕ ಸ್ಥಿತಿ ತೃಪ್ತಿಕರವಿದ್ದು ವೈಭವ-ದಿಂದ ಕೂಡಿತ್ತು. ಜನರು ಸಾಮಗ್ರಿ ಎಷ್ಟು ಬೇಕೋ ಅಷ್ಟು ಹಣವನ್ನು ಶೇಖರಮಾಡಿ ನಾಳಿನ ಚಿಂತೆಯನ್ನು ಬಿಟ್ಟು ಹೊಸಹೊಸ ಆಲೋಚನೆ ಮತ್ತು ಕಾರ್ಯಗಳಲ್ಲಿ ಮನಸ್ಸು ತಿರುಗಿಸಿದರು. ಅಂತೆಯೇ ಸಾಹಿತ್ಯ, ಕಲೆ, ಶಿಲ್ಪ ಇತ್ಯಾದಿಗಳಲ್ಲಿ ಗುಪ್ತರ ಕಾಲವನ್ನು ಗ್ರೀಸಿನ ಪೆರೀಕ್ಲೀಸನ ಕಾಲದಂತೆ ಸುವರ್ಣ ಯುಗವೆಂದು ಕರೆಯುತ್ತಾರೆ.

ಕ್ರಿ. ಶ. ೧೦ನೆಯ ಶತಮಾನದಿಂದೀಚೆಗೆ ರಾಜ್ಯದ ಸಾಮಾಜಿಕ ಪದ್ಧತಿಗಳು ಬದಲಾಗಿ ಜನರ ಆರ್ಥಿಕ ಪರಿಸ್ಥಿತಿ ಹಿಂದಿನಷ್ಟು ಸಮರ್ಪಕವಾಗಿರಲಿಲ್ಲವೆಂದು ತಿಳಿದು ಬರುತ್ತದೆ.

## ಮುಖ್ಯ ಪಟ್ಟಣಗಳು

ನಾಲಂದ, ತಕ್ಷಶಿಲಾ, ವಿಕ್ರಮಶಿಲಾ, ಉಜ್ಜಯಿನಿ, —ಇವು ವಿಶ್ವವಿದ್ಯಾಲಯಗಳಿದ್ದ ಪ್ರಸಿದ್ಧ ಪುರಾತನ ಪಟ್ಟಣ-ಗಳು. ಭರೂಚಕ, ಶ್ರಾವಸ್ತಿ, ಪಾಟಲೀಪುತ್ರ ಮೊದಲಾದವು ಪ್ರಸಿದ್ಧ ವ್ಯಾಪಾರ ಕೇಂದ್ರಗಳಾಗಿದ್ದವು. ದಕ್ಷಿಣದಲ್ಲಿ ಪೈಠಣ, ನಾಸಿಕ, ಮಳಖೇಡ, ಬದಾಮಿ, ಕಂಚಿ, ಮಧುರಾ, ತಲಕಾಡು ಇತ್ಯಾದಿ ಪ್ರಸಿದ್ಧವಿದ್ದವು.

## ರಾಜ್ಯಪದ್ಧತಿ

ರಾಜಕೀಯ ಬೆಳವಣಿಗೆ ಆರ್ಯರ ಕಾಲದಿಂದಲೂ ನಡೆದಿದೆ. ಮುಖಂಡ, ಅವನ ತರುವಾಯ ರಾಜ ಮತ್ತು ಪ್ರಬಲವಾದ

ರಾಜ್ಯಗಳು ಏರ್ಪಟ್ಟಿದ್ದವು. ರಾಜಸತ್ತೆಯು ಹಾಗೂ ಪ್ರಜಾಸತ್ತೆಯು ತತ್ವಗಳು ಧರ್ಮಶಾಸ್ತ್ರದಲ್ಲಿ ವರ್ಣಿತವಾಗಿವೆ. ದಂಡ ಎಂದರೆ ವಿಧೇಯತೆ; ಧರ್ಮ ಎಂದರೆ ಶಾಸನ; ನ್ಯಾಯ—ಇವು ವೇದಗಳಲ್ಲಿಯೂ ವರ್ಣಿತವಾಗಿವೆ. ರಾಜನ ಕರ್ತವ್ಯಗಳು ಖಚಿತವಾಗಿ ಹೇಳಲ್ಪಟ್ಟಿವೆ. "To thee, the state is given for agriculture, for Common weal, for Prosperity and Progress." ವೇದಗಳ ಕಾಲದಲ್ಲಿ ಪ್ರಜಾ ಸತ್ತೆಯೂ, ಮೌರ್ಯರ ಕಾಲದಲ್ಲಿ ಬ್ಯೂರಾಕ್ರಟಿಕ್ ಸರ್ಕಾರವೂ, ಕ್ರಿ. ಪೂ. ೬ ನೆ ಶತಮಾನದಲ್ಲಿ ಪ್ರಜಾತಂತ್ರ ರಾಜ್ಯಗಳೂ ಇದ್ದುವೆಂದು ತಿಳಿದು ಬಂದಿದೆ. ಮಗಧ, ಕೌಶಾಂಬಿಕ, ಕೋಸಲ, ಅವಂತಿ, ಎಂಬ ಪ್ರಬಲವಾದ ಅರಸೊತ್ತಿಗೆಗಳೂ, ಲಿಚ್ಛವೀ ಮಲ್ಲಿ ಮೊದಲಾದ ಗಣತಂತ್ರ ರಾಜ್ಯಗಳೂ ಇದ್ದವು.

ಕೌಟಿಲ್ಯನ ಅರ್ಥಶಾಸ್ತ್ರವು, ರಾಜನು ಪ್ರಜೆಗಳಿಗೆ ರಕ್ಷಕನಾಗಿದ್ದು, ಕರ ತೆಗೆದುಕೊಂಡಿದ್ದಕ್ಕೆ ಪ್ರಜಾಪಾಲನೆ, ಅವರ ಸುಖಕ್ಕಾಗಿ ಸತತವೂ ಶ್ರಮಿಸಬೇಕೆಂದು ಸಾರಿದೆ.

ಪ್ರಕೃತ ವಿವೇಚನೆಯಲ್ಲಿ ರಾಜ್ಯಪದ್ಧತಿಯೇ ಮುಖ್ಯ ವಿಷಯವಾಗಿಲ್ಲದುದರಿಂದ ಹೆಚ್ಚಿನ ವಿಚಾರಗಳನ್ನು ಇಲ್ಲಿ ಸೂಚಿಸಲು ಅವಕಾಶವಿಲ್ಲ. ಆದರೆ ಸಾಮಾಜಿಕ ಜೀವನ ದೃಷ್ಟಿಯಿಂದ ಭಾರತದ ರಾಜಸತ್ತೆಯು ಪ್ರಜಾಸಭೆ ಮತ್ತು ಸಮಿತಿ ಹಾಗೂ ಸಚಿವ ಮಂಡಲದ ಅಂಕೆ (checks and balances) ಗಳಿಂದ ಕೂಡಿದ್ದಿತು. ಅವರ ಆಡಳಿತದ

ಪದ್ಧತಿಯನ್ನು "Limited monarchy" ಅಥವಾ "Benevolent Autocracy" ಎಂದು ಕರೆಯಬಹುದು. ಆದರೆ ಅಶೋಕನಂತಹ ಸಾಮ್ರಾಟರು ಈ ಪದ್ಧತಿಗೂ ಹೆಚ್ಚಿನ ಆದರ್ಶ ಪಾಲಿಸಿ ಆಡಳಿತ ಸ್ಥಾಪಿಸಿದ್ದರು.

## ಸ್ಥಳೀಯ ಸರ್ಕಾರ

ಸ್ಥಳೀಯ ಸರ್ಕಾರದ ಪ್ರಾಮುಖ್ಯ ಈಗ ಹೆಚ್ಚಿದೆ. ಆದರೆ ಪ್ರಾಚೀನ ಭಾರತದಲ್ಲಿ, ಅದರಲ್ಲೂ ದಕ್ಷಿಣ ಭಾರತದ ಕರ್ನಾಟಕ ಮತ್ತು ಚೋಳ ರಾಜ್ಯಗಳಲ್ಲಿ ಸ್ಥಳೀಯ ಸರ್ಕಾರದ ವ್ಯವಸ್ಥೆ ಇದ್ದು ಅದು ಸಮರ್ಪಕವಾಗಿತ್ತೆಂದು ತಿಳಿದು ಬರುತ್ತದೆ. ಸ್ಥಳೀಯ ಸಂಸ್ಥೆಗಳು ಅಲ್ಲಿನ ಸಾಮಾಜಿಕ, ಆರ್ಥಿಕ ವಿದ್ಯಮಾನಗಳನ್ನು ತಮ್ಮ ಹಿಡಿತದಲ್ಲಿಟ್ಟುಕೊಳ್ಳುವುದಲ್ಲದೆ ಒಬ್ಬೊಬ್ಬರಿಗೂ ತಲೆದೋರಬಹುದಾದ ಕಲಹಗಳನ್ನು ತೀರ್ಮಾನಿಸುತ್ತಿದ್ದವು. ಈ ಸಂಸ್ಥೆಗಳಿಗೆ ಚುನಾವಣೆ ನಿಯಮವಿದ್ದು ಅದು ಸೂಕ್ತವಾಗಿ ನಡೆಯಲು ವ್ಯವಸ್ಥೆ ಇದ್ದುದೂ ತಿಳಿಯಬರುತ್ತದೆ. ಚೋಳ, ಪಾಂಡ್ಯ ರಾಜರು ಒಳಾಡಳಿತ ಮಾತ್ರವಲ್ಲದೇ ನೌಕಾ ಬಲವನ್ನು ಕಟ್ಟಿ ನೆರೆಹೊರೆಯ ಪ್ರದೇಶಗಳಲ್ಲಿ ಸ್ವಾಸ್ಥ್ಯಗಳನ್ನು ಸಹ ಸ್ಥಾಪಿಸಿದ್ದರು.

## ಆಹಾರ

ಸ್ಥಿತಪ್ರಜ್ಞನು ಶುದ್ಧವಾದ ಆಹಾರ ಸೇವನೆ ಮಾಡಬೇಕೆಂದು ಹೇಳಿದೆ. ಸ್ಮೃತಿಗಳಲ್ಲಿ ಆಹಾರನಿಯಮಗಳು ಸಿಗುತ್ತವೆ. ಈ ನಿಯಮಗಳಲ್ಲಿ ಆರೋಗ್ಯದೃಷ್ಟಿ

ಆಗಿನ ಜನರಿಗಿದ್ದದ್ದು ತಿಳಿಯುತ್ತದೆ. ಸಾಮಾನ್ಯವಾಗಿ ಮಾಂಸಭಕ್ಷಣ ನಿಷೇಧವಿತ್ತು. ಮತ್ಸ್ಯಾಹಾರವನ್ನು ಕೆಲವು ಗ್ರಂಥಗಳು ಹೇಳಿವೆ. ವಿಧವಿಧವಾದ ಪಾನೀಯಗಳು ಹೇಳಲ್ಪಟ್ಟಿವೆ. ಮಧುಪಾನ ರೋಗಿಗೆ ಉತ್ತಮವೆಂದು ತಿಳಿಸಿದೆ. ಕೌಟಿಲ್ಯನ ಪ್ರಕಾರ ಮದ್ಯಪಾನಕ್ಕೆ ಸಂಬಂಧಪಟ್ಟ ನಿಯಮಗಳಿವೆ. ಕಾಲಕ್ರಮೇಣ ಮದ್ಯಪಾನ ಪಾತಕ-ವೆಂತಲೂ ಸೂಚಿಸಿ ಖಂಡಿಸಿರುವ ಪ್ರಕರಣಗಳೂ ಇವೆ. ವಿದೇಶೀಯರ ಬರವಣಿಗೆಗಳಿಂದಲೂ ಮದ್ಯಪಾನವು ನಿಷೇಧ ವೆಂದು ತಿಳಿಯಬರುತ್ತದೆ.

ದ್ರೌಪದಿಯ ವಿವಾಹಸಮಯದಲ್ಲಿ 'ಮಹಾಭಾರತ'ವು ಆಹಾರದಲ್ಲಿ ಭಕ್ಷ್ಯಭೋಜ್ಯಗಳ ವರ್ಣನೆಯ ಅತ್ಯುತ್ತಮ ಚಿತ್ರವನ್ನು ಒದಗಿಸುತ್ತದೆ.

## ತಂಬಾಕು, ನಶ್ಯ ಇತ್ಯಾದಿ

ವೈದ್ಯಗ್ರಂಥಗಳಲ್ಲಿ ನಶ್ಯದ ವಿವರಣೆ ಇವೆ. ತಂಬಾಕಿನ ಉಪಯೋಗ ಆಧುನಿಕ ಕಾಲದಿಂದೀಚೆಗೆ ಆಯಿತು. ಧೂಮ ಪಾನವು ಪ್ರಾಚೀನಪದ್ಧತಿ. ಆದರೆ ಈ ಅಭ್ಯಾಸ ತಂಬಾಕಿ-ನದಲ್ಲ – ಸುಗಂಧದ್ರವ್ಯಗಳದ್ದು. ವಿಜಯನಗರ ರಾಜ್ಯದಲ್ಲೂ ಧೂಮಪಾನವು ಪ್ರಚಾರದಲ್ಲಿತ್ತು. ಸುಗಂಧ ಕಡ್ಡಿಗಳ ತಯಾರಿಕೆ ತಿಳಿದಿತ್ತು. ವೀಳ್ಯದೆಲೆ, ಅಡಿಕೆ, ಮುಖಕ್ಕಾಗಿ ಸುಗಂಧಗಳು ಪ್ರಯೋಗದಲ್ಲಿದ್ದವು. ತಾಂಬೂಲ ಸೇವನೆ ಭಾರತಕ್ಕೆ ಪಾಲಿನೇಷಿಯಾದಿಂದ ದಕ್ಷಿಣಕ್ಕೆ ಹರಡಿ ನಂತರ ಉತ್ತರಕ್ಕೆ ವ್ಯಾಪಿಸಿತೆಂದು ಭಾವನೆ ಇದೆ.

## ವೇಷ ಭೂಷಣಗಳು

ಹಿಂದಿನ ಕಾಲದಲ್ಲಿ ಹೊಲಿದ ಅರಿವೆಗಳನ್ನು ಉಪ-ಯೋಗಿಸುತ್ತಿರಲಿಲ್ಲ. ಉಣ್ಣೆ, ರೇಷ್ಮೆ, ನಾರು, ಕೃಷ್ಣಾಜಿನ-ಇವುಗಳ ವಸ್ತ್ರಗಳು ಬಳಕೆಯಲ್ಲಿದ್ದವು. ದ್ವಿಪಟ ಅಥವಾ ಧೋತರ, ಮೇಲ್ವಸ್ತ್ರ – ಇವುಗಳ ಉಪಯೋಗಕ್ಕೆ ಮಾನ್ಯತೆ ಇತ್ತು. ಕಚ್ಚೆಹಾಕಿ ಕಟ್ಟಿಕೊಳ್ಳುವ ಪದ್ಧತಿ ಗೌರವಸೂಚಕವಾಗಿದ್ದಿತು. ಸ್ತ್ರೀಯರು ಒಂದೇ ಉದ್ದವಾದ ವಸ್ತ್ರವನ್ನು ಭುಜದಿಂದ ಕಾಲಿನವರೆಗೆ ಉಡುತ್ತಿದ್ದರು. ಪ್ರಾಚೀನ ಶಿಲ್ಪಮೂರ್ತಿಗಳು ಆಗಿನ ಕಾಲದ ವೇಷ ಭೂಷಣಗಳನ್ನು ತಿಳಿಸುತ್ತವೆ. ವೇದಕಾಲದಲ್ಲಿ ಸ್ತ್ರೀಯರು ತಲೆಗೆ ಭೂಷಣ-ಗಳನ್ನು ಧರಿಸುತ್ತಿದ್ದರು. ಅಧಿಕಾರವರ್ಗದಲ್ಲಿದ್ದವರು, ರಾಜನ ಸಭೆಗೆ ಹೋಗುವವರು, ಯುದ್ಧಪ್ರಸಂಗದಲ್ಲಿ ಹಾಕಿಕೊಳ್ಳ-ಬೇಕಾಗಿದ್ದ ವಸ್ತ್ರಗಳು ಹೇಳಲ್ಪಟ್ಟಿವೆ.

ಸ್ತ್ರೀಪುರುಷರು ಅಲಂಕರಿಸಿಕೊಳ್ಳುತ್ತಿದ್ದರು. ಸುಗಂಧ ದ್ರವ್ಯಗಳನ್ನು ಉಪಯೋಗಿಸುತ್ತಿದ್ದರು. ಕೇಶಾಲಂಕಾರವೇ ಒಂದು ಕಲೆಯಾಗಿದ್ದಿತು. ಸ್ತ್ರೀಯರು ಮುಖಕ್ಕೆ ಲೋಧ್ರ ಚಕ್ಕೆಯ ಚೂರ್ಣವನ್ನೂ, ತುಟಿಗೆ ಕೆಂಪು ಬಣ್ಣವನ್ನೂ ಕಣ್ಣಿಗೆ ಅಂಜನವನ್ನೂ ಹಚ್ಚಿಕೊಳ್ಳುತ್ತಿದ್ದರು. ಪಾದರಕ್ಷೆಗಳ ಉಪಯೋಗ, ಕರವಸ್ತ್ರಗಳ ಉಪಯೋಗ, ಅವಕುಂಠನದ ಉಪಯೋಗ ಹಾಗೂ ಸ್ತ್ರೀಯರು ಧರಿಸುತ್ತಿದ್ದ ಆಭರಣಗಳ

ದೊಡ್ಡ ಪಟ್ಟಿಯು ಹಿಂದಿನ ಕಾಲದ ಗ್ರಂಥಗಳಲ್ಲಿ ವರ್ಣಿತ-ವಾಗಿವೆ.

## ವ್ಯಾಯಾಮ, ವಿನೋದಗಳು

ಮಲ್ಲಯುದ್ಧ, ಚದುರಂಗ, ಅಶ್ವಕ್ರೀಡೆ, ಕುಸ್ತಿ, ಜೂಜು, ಬೇಟೆ, ಚೆಂಡಾಟ, ಡೊಂಬರಾಟ; ಆನೆ, ಕೋಳಿ, ಟಗರು, ಕೋಣಗಳ ಕಾಳಗ, ಎಲೆ ಆಟ, (ಇಸ್ಪೀಟ್) ಇತ್ಯಾದಿ ಪ್ರಚಾರದಲ್ಲಿದ್ದವು. ಒಗಟು ಬಿಡಿಸುವುದು, ಅಂತ್ಯಾಕ್ಷರಿ, ಭರತನಾಟ್ಯಂ, ಸಂಗೀತ, ಬಿಲ್ಲುವಿದ್ಯೆ, ಕೋಲುವರಸೆ, ಕತ್ತಿ-ವರಸೆ, ಸೂರ್ಯನಮಸ್ಕಾರ – ಈ ವಿನೋದಗಳೂ ಇದ್ದವು. ಪಾಶ್ಚಾತ್ಯ ವ್ಯಾಯಾಮದ ರೀತಿಗಳು ದೇಹದ ಬೆಳವಣಿಗೆಗಾಗಿ ಗಮನಕೊಟ್ಟರೆ, ಭಾರತೀಯರು ದೇಹದ ಬೆಳವಣಿಗೆಯ ಜೊತೆಗೆ ಸರ್ವಾಂಗಗಳೂ ಬೆಳೆದು ಆತ್ಮ ಅಥವಾ ಮನಸ್ಸು ಸ್ಥಿರವಾಗಿರಲು ಪ್ರಧಾನತೆ ಕೊಟ್ಟಿದ್ದರು.

## ರಾಜಧರ್ಮ

ರಾಜರು ವೈಭವದಿಂದಲೂ, ಪ್ರಾಬಲ್ಯದಿಂದಲೂ, ಆಳುತ್ತಿದ್ದರೂ ಅವರ ದಿನಚರಿ, ಪದ್ಧತಿ, ಕರ್ತವ್ಯ ಇತ್ಯಾದಿ-ರಾಜಧರ್ಮವನ್ನನುಸರಿಸಿದ್ದಿತು. ಅವರ ಜೀವನ ಸಂಪನ್ನವಾದ ತುಂಬು ಜೀವನವಾಗಿತ್ತು.

## ಸಾಮಾನ್ಯ ಧರ್ಮ

ಸಾಮಾನ್ಯ ಜನರು ತಮ್ಮ ನಿತ್ಯ ಜೀವನದಲ್ಲಿ ಆತ್ಯುತ್ತಮ ನಿಯಮಗಳನ್ನು ಅನುಸರಿಸಿಕೊಂಡು ನೆಮ್ಮದಿ ಜೀವನ

ನಡೆಸುತ್ತಿದ್ದರು. ಪರರ ಕಷ್ಟಗಳಿಗೆ ಸಹಾನುಭೂತಿ ತೋರಿ ಸಹಾಯ ಮಾಡುತ್ತಿದ್ದರು.

## ಪರದೇಶದ ಯಾತ್ರಿಕರು

ಪ್ರಾಚೀನ ಕಾಲದ ವೈಭವವನ್ನೂ, ಸಮಾಜವನ್ನೂ, ವರ್ಗಗಳನ್ನೂ ಪುರಾತನ ಗ್ರಂಥಗಳೇ ಅಲ್ಲದೆ ಪರದೇಶದ ಯಾತ್ರಿಕರೂ ವರ್ಣಿಸಿ ಸಮರ್ಥನೆ ಮಾಡಿದ್ದಾರೆ:– ತಾಲೆಮಿ, ಮೆಗಾಸ್ತನೀಸ್, ಫಾಹಿಯಾನ್, ಹ್ಯೂಯೆನ್‌ತ್ಸಾಂಗ್, ಈತ್ಸಿಂಗ್, ಫಿರಿಷ್ಟಾ, ಪೇಯಿೀ, ನ್ಯೂನಿಜ್ ಮತ್ತು ಇತರರು ಈ ದೇಶದಲ್ಲಿ ಎಲ್ಲ ಕಡೆಯಲ್ಲೂ ತಿರುಗಾಡಿ ತಮ್ಮ ತಮ್ಮ ಭಾವನಾ ಚಿತ್ರಗಳನ್ನು ದೊರಕಿಸಿಕೊಟ್ಟಿದ್ದಾರೆ. ಇವು ಮಹತ್ವದ ಚಾರಿತ್ರಿಕ ಆಧಾರಗಳು.

---

## ೪. ಕನ್ನಡನಾಡಿನ ಸಾಮಾಜಿಕ ಚಿತ್ರ

'ಚೆಲುವ' ಕನ್ನಡನಾಡು ಕ್ರಿ. ಪೂ. ೩ನೇ ಶತಮಾನದಲ್ಲಿ ವಿಂಧ್ಯಾದ್ರಿಯಿಂದ ದಕ್ಷಿಣ ಸಮುದ್ರದವರೆಗೂ ಹಬ್ಬಿತ್ತು. ರಾಜಕವಿ ನೃಪತುಂಗನೂ ನಂಜುಂಡಕವಿಯೂ ಹೇಳಿರುವಂತೆ ಗೋದಾವರಿಯಿಂದ ಕಾವೇರಿ ನದಿಯ ವರೆಗೂ ಹಬ್ಬಿರುವ ನಾಡು ಕನ್ನಡ ನಾಡಾಗಿತ್ತು. ಈ ನಾಡಿನ ಪಶ್ಚಿಮ ತೀರ ಪ್ರದೇಶ, ರೇವುಗಳೂ, ಪರ್ವತ ಪಂಕ್ತಿಗಳೂ, ನದೀಬಯಲುಗಳೂ ಇದರ ಚರಿತ್ರೆಯನ್ನು ರೂಪಿಸಿವೆ. ಈ ನಾಡಿನ ಪೂರ್ವನಿವಾಸಿಗಳು ವಾನರರು ಅಥವಾ ದ್ರಾವಿಡರು. ರಾಮಾಯಣ ಕಾಲದಲ್ಲಿ ಋಷ್ಯಮೂಕ ಪರ್ವತ, ಮತಂಗವನ, ಪಂಪಾಸರೋವರ, ಕಿಷ್ಕಿಂಧೆ ಎಲ್ಲವೂ ಪ್ರಸಿದ್ಧವಾಗಿದ್ದವು, ಮಹಾಭಾರತಕಾಲಕ್ಕೆ ಕರ್ನಾಟಕದ ಕೆಲವು ಭಾಗಗಳು ಕೌರವ ಪಾಂಡವರ ರಾಜ್ಯಕ್ಕೆ ಸೇರಿದ್ದವು. ಈ ಕಾಲದಲ್ಲಿ ಕುಂತಳ, ನಾಟ, ಲಾಟ ಎಂಬ ಹೆಸರು ಕನ್ನಡನಾಡಿಗೆ ಇದ್ದವು.

ಕನ್ನಡನಾಡಿನ ಚರಿತ್ರೆಯು ಪುರಾತನವೂ ಕೀರ್ತಿಯುತವೂ ಆಗಿದೆ. ಈ ಚರಿತ್ರೆಯನ್ನು ಪ್ರಾಚೀನ ಕಾಲದ

ಆಧಾರಗಳನ್ನವಲಂಬಿಸಿ ಬರೆಯಲ್ಪಟ್ಟಿದೆ. ಅಶೋಕನ ಶಾಸನ-ಗಳು ಈ ನಾಡಿನ ಅನೇಕ ಸ್ಥಳಗಳಲ್ಲಿ ಸಿಕ್ಕಿರುವದರಿಂದ ಈ ನಾಡಿನ ಚರಿತ್ರೆ ಮಹತ್ವದ್ದನಿಸಿದೆ. ಪ್ರಾಚೀನ ಕರ್ನಾಟಕದ ಬಹುಭಾಗ ಶಾತವಾಹನರ ರಾಜ್ಯದಲ್ಲಿತ್ತು. ಈ ನಾಡಿಗೆ 'ಕನ್ನಾಡು' 'ಕರ್ನಾಡು' 'ಕರ್ನಾಟಕ' ಎಂಬ ಪದಗಳು ಹೇಳಲ್ಪಟ್ಟಿವೆ.

ಕರ್ನಾಟಕ ಇತಿಹಾಸವು ಕ್ರಿ.ಪೂ. ೩ನೇ ಶತಮಾನದಿಂದೀ-ಚೆಗೆ ಸ್ಪಷ್ಟವಾಗಿ ರೂಪಿತವಾಗಿದೆ; ಶಾತವಾಹನರ ಆಳ್ವಿಕೆ; ಕ್ರಿ. ಶ. ೩ನೇ ಶತಮಾನದಿಂದ- ೧೦ ನೇ ಶತಮಾನದವರೆಗೆ ಕದಂಬರು, ಗಂಗರೂ; ಪಲ್ಲವರ ಕಾಲದ ಸಂಬಂಧ; ಕ್ರಿ. ಶ. ೫೭೮ ರಿಂದ ೭೫೭ ರ ವರೆಗೆ ಬಾದಾಮಿ ಚಾಳುಕ್ಯರು; ಕ್ರಿ. ಶ. ೭೫೭ ರಿಂದ ೯೭೩ ರ ವರೆಗೆ ರಾಷ್ಟ್ರಕೂಟರು, ಕ್ರಿ. ಶ. ೯೭೩ ರಿಂದ ೧೧೮೯ ರ ವರೆಗೆ ಕಲ್ಯಾಣಿ ಚಾಳುಕ್ಯರು; ಕ್ರಿ. ಶ. ೧೧೮೯ ರಿಂದ ೧೩೧೨ ರ ವರೆಗೆ ಯಾದವರು (ದೇವಗಿರಿ); ಕ್ರಿ. ಶ. ೧೧೫೬ ರಿಂದ ೧೧೮೩ ರ ವರೆಗೆ ಕಳಚೂರಿಯರು; ಕ್ರಿ. ಶ. ೧೦೦೦ ದಿಂದ ೧೮೪೬ ರ ವರೆಗೆ ಹೊಯ್ಸಳರು; ಶಿಲಾಹಾರರು (ಕೊಲ್ಲಾಪೂರ); ಚೋಳರ ಕಾಲದ ಸಂಬಂಧ; ಅನಂತರ ವಿಜಯನಗರದ (೧೩೪೬-೧೬೪೬) ಮತ್ತು ಮೈಸೂ-ರಿನ (೧೬೩೯ ನಂತರ) ಉಚ್ಛ್ರಾಯಸ್ಥಿತಿ - ಇವು ಐತಿ-ಹಾಸಿಕ ಕಾಲಗಳು.

ಕನ್ನಡನಾಡಿನ ಪೂರ್ವನಿವಾಸಿಗಳಾದ ದ್ರಾವಿಡರ ಜತೆಗೆ

ಕೆಲವು ಗುಡ್ಡಗಾಡಿನ ಜನರಾದ ಬಡಗರು, ತೋಡರು ಮತ್ತು ಭಿಲ್ಲರೂ, ಬೇಡರೂ, ಕುರುಬರೂ ಹೊಲೆಯರೂ ವಾಸವಾಗಿದ್ದರು. ಆರ್ಯರು ಕನ್ನಡನಾಡಿಗೆ ಬಂದು ನೆಲಸಿದ ನಂತರ ಆರ್ಯರ ನಡೆ, ನುಡಿ, ಪದ್ಧತಿಗಳು ಸ್ಥಾಪಿತವಾದವು. ಮತ್ತು ಕನ್ನಡ ಸಮಾಜ ವಿಕಾಸಹೊಂದಿತು. ಆರ್ಯಪದ್ಧತಿಯೊಡನೆ ಬೌದ್ಧ, ಜೈನ ಸಂಪ್ರದಾಯಗಳೂ ಕ್ರಿ. ಪೂ. ೩ ನೇ ಶತಮಾನದಿಂದೀಚೆಗೆ ಬೆರೆತವು.

ಕನ್ನಡ ನಾಡಿನ ಸಮಾಜವು ವರ್ಣಾಶ್ರಮಪದ್ಧತಿಯ ಮೇಲೆ ಸ್ಥಾಪಿತವಾಗಿತ್ತು. ಜಾತಿಗಳಿದ್ದರೂ ಉಪಜಾತಿಗಳಿರಲಿಲ್ಲ. ಶೂದ್ರರನ್ನು ಬಿಟ್ಟು ಉಳಿದ ಮೂರು ವರ್ಣದವರಲ್ಲಿ ದ್ವೇಷಾಸೂಯೆಗಳಿರಲಿಲ್ಲ. ಸಮಾಜದಲ್ಲಿ ಕುಲವೇ ಪ್ರಧಾನವಾಗಿತ್ತು. ಹಳ್ಳಿಯ ವಾಸವೇ ಹೆಚ್ಚೆಂದು ತಿಳಿಯಬರುತ್ತದೆ; ಏಕೆಂದರೆ ಪ್ರತಿಯೊಂದು ಹಳ್ಳಿಯಲ್ಲೂ ಅದರ ವ್ಯವಹಾರಗಳನ್ನೂ, ಆಗುಹೋಗುಗಳನ್ನೂ ನೋಡಿಕೊಳ್ಳಲು ಒಂದೊಂದು ಗ್ರಾಮಸಭೆಯಿದ್ದಿತು. ಹಳ್ಳಿಯಲ್ಲಿ ಕುಟುಂಬಗಳು ಪಿತೃಪ್ರಧಾನವಾಗಿದ್ದವು. ನೇಕಾರ, ಒಕ್ಕಲಿಗ, ಕಮ್ಮಾರ, ಕುಂಬಾರ, ವರ್ತಕ ಮೊದಲಾದ ಉದ್ಯೋಗಸ್ಥರ ಸಂಘಗಳೂ ಸ್ಥಾಪಿತವಾಗಿದ್ದವು. ದೇವಸ್ಥಾನಗಳು, ಮಠಗಳು ಧಾರ್ಮಿಕ ಹಾಗೂ ವಿದ್ಯಾಕೇಂದ್ರಗಳಾಗಿದ್ದವು. ಸಮಾಜದಲ್ಲಿ ತಲೆದೋರಿದ ಹಾನಿಗಳನ್ನು ತಪ್ಪಿಸಿ ಸುವ್ಯವಸ್ಥಿತ ಸಮಾಜ ಸ್ಥಾಪನೆಯನ್ನು ಅನೇಕ ಪ್ರಮುಖರು ಸೇರಿ ನೆರವೇರಿಸುತ್ತಿದ್ದರು.

ಕನ್ನಡನಾಡಿನ ಜನರು ವಿದ್ಯೆಗೆ ಮಹತ್ವದ ಸ್ಥಾನ ಕೊಟ್ಟಿದ್ದರು. ಪ್ರಾಕೃತ, ಸಂಸ್ಕೃತ, ಕನ್ನಡ ಭಾಷೆಗಳಲ್ಲಿ ವಿದ್ಯೆ ಕಲಿಸುತ್ತಿದ್ದರು. ಕ್ರಿ. ಶ. ೫ ನೇ ಶತಮಾನದಿಂದೀಚೆಗೆ ಕನ್ನಡ ಭಾಷೆಯು ರಾಜಭಾಷೆಯಾಗಿ ಪ್ರಸಿದ್ಧಿಗೆ ಬಂದಿತು. ಜೈನ, ವೀರಶೈವ ಕವಿಗಳು ಕನ್ನಡ ಭಾಷೆಯ ಅಭಿವೃದ್ಧಿಗೆ ಕಾರಣಕರ್ತರು. ಶಾಸನಗಳನ್ನು ಕನ್ನಡದಲ್ಲಿ ಬರೆಯತೊಡಗಿದರು. ಸಂಸ್ಕೃತಾಭಿಮಾನಿಗಳೂ ಸಹ ಶಂಕರರ, ಮಧ್ವರ ಮತ್ತು ರಾಮಾನುಜರ ಧರ್ಮವಿಚಾರಗಳನ್ನು ಸರಳ ಕನ್ನಡದಲ್ಲಿ ಹೇಳತೊಡಗಿದರು. ಕ್ರಿ. ಪೂ. ೩ ನೇ ಶತಮಾನದಿಂದಲೂ ಬ್ರಾಹ್ಮೀಲಿಪಿ ಕನ್ನಡಿಗರಿಗೆ ತಿಳಿದಿತ್ತು. ಈ ಲಿಪಿಯನ್ನೇ ಕನ್ನಡ ಲಿಪಿಗೆ ಹೊಂದಿಸಿಕೊಂಡು ಸುಂದರವಾದ ಅಕ್ಷರಗಳನ್ನು ಬರೆಯಲಾರಂಭಿಸಿದರು. ಕಲಿಸುತ್ತಿದ್ದ ಶಿಕ್ಷಣ ಪುಸ್ತಕದ ಕಂತೆಯಾಗಿರಲಿಲ್ಲ. ಪರೀಕ್ಷೆಗಳಂಥ ಆಡಂಬರಗಳಿರಲಿಲ್ಲ. ಓದು, ಬರಹ, ಗಣಿತ, ಸಂಗೀತ, ಕನ್ನಡಭಾಷೆಯ ಕಲಿಯುವಿಕೆ – ಇವುಗಳನ್ನು ದೇವಾಲಯ, ಮಠ, ಅಗ್ರಹಾರಗಳಲ್ಲಿ ಹೇಳಿಕೊಡುತ್ತಿದ್ದರು. ತರುವಾಯ ಮತ್ತಷ್ಟು ವ್ಯಾಸಂಗ ಮಾಡಲಿಚ್ಛಿಸಿದವರು ಕಾವ್ಯ, ಸಾಹಿತ್ಯ, ವ್ಯಾಕರಣ, ಇತಿಹಾಸ ಮತ್ತು ಪುರಾಣಗಳನ್ನು ಕಲಿಯುತ್ತಿದ್ದರು. ಅನಂತರ ಉಚ್ಚ ಶಿಕ್ಷಣವೆಂದರೆ ವೇದ, ವೇದಾಂಗ, ದರ್ಶನ, ಮೀಮಾಂಸೆ, ಜ್ಯೋತಿಷ ಇತ್ಯಾದಿಗಳ ಅಭ್ಯಾಸ. ಶಿಕ್ಷಣದ ಮುಖ್ಯ ಉದ್ದೇಶವೆಂದರೆ ವಿದ್ಯಾರ್ಥಿಯಾದವನು ಸ್ಮರಣಶಕ್ತಿ, ಪ್ರವಚನಶಕ್ತಿ ಮತ್ತು ವಾಕ್‌ಪಟುತ್ವಗಳನ್ನು ಹೊಂದುವುದು. ಬನವಾಸಿ, ತಲಕಾಡು, ಐಹೊಳೆ, ಗೋಕರ್ಣ, ವಿಜಯನಗರ,

ಸಾಲೋಟಗಿ, ವಿಜಾಪೂರ, ಬಳ್ಳಿಗಾವೆ, ಮಾಲಿಂಗಿ, ಕೋಡೀ
ಮಠ ಮೊದಲಾದ ಸ್ಥಳಗಳು ವಿದ್ಯಾಕೇಂದ್ರಗಳಾಗಿ ಪ್ರಸಿದ್ಧ
ವಾಗಿದ್ದವು. ಪಂಡಿತ ಸಮ್ಮೇಳನಗಳು, ವಿದ್ವಜ್ಜನರ ಗೋಷ್ಠಿ
ಗಳೂ ನಡೆಯುತ್ತಿದ್ದವು. ಅನೇಕ ಪಂಡಿತರೂ, ಮತಜ್ಞಾನಿ
ಗಳೂ ಉಪನ್ಯಾಸ ಮತ್ತು ಚರ್ಚಾಕೂಟವನ್ನು ನಡೆಯಿಸು
ತ್ತಿದ್ದರು. ಇವರಲ್ಲಿ ಮುಖ್ಯರೆಂದರೆ ಶಂಕರರು, ಬಸವೇಶ್ವರರು,
ಮಂಡನಮಿಶ್ರ, ಚೆನ್ನಬಸವರು, ವೇದಾಂತ ದೇಶಿಕರು.

ಕನ್ನಡನಾಡಿನ ಜನಜೀವನವು ಸ್ಥಿರತೆಯಿಂದ ಏರ್ಪಟ್ಟಿ
ದ್ದಿತು. ರಾಜಕೀಯ ಗೊಂದಲಗಳು ನಿತ್ಯಜೀವನಕ್ಕೆ ಧಕ್ಕೆ
ತರುತ್ತಿರಲಿಲ್ಲ. ಹಲವಾರು ರಾಜ್ಯಗಳೇರ್ಪಟ್ಟಿದ್ದರೂ ಎಲ್ಲಕ್ಕೂ
ಸಾಮಾನ್ಯವಾದ ರಾಜ್ಯಪದ್ಧತಿ, ಸಾಮಾಜಿಕಪದ್ಧತಿ, ಸಾಂಸ್ಕೃ
ತಿಕ ಪದ್ಧತಿಗಳಿದ್ದವು. ಕನ್ನಡ ರಾಜ್ಯದ ಅರಸರು, ಪ್ರಮು
ಖರು, ಕನ್ನಡಿತಿಯರು, ಕವಿಗಳು, ಧರ್ಮಪ್ರಚಾರಕರು
ಕನ್ನಡ ಸಂಸ್ಕೃತಿಯ ಬೆಳವಣಿಗೆಗೆ ನೆರವಾಗಿದ್ದಾರೆ. ಸರ್ವ
ಸಾಮಾನ್ಯವಾಗಿ ಎಲ್ಲ ಕನ್ನಡಿಗರು ನಿಷ್ಕಪಟ ವೃತ್ತಿ, ಉನ್ನತ
ಆಶೆ, ಮಹತ್ವಾಕಾಂಕ್ಷೆ, ಉತ್ಕೃಷ್ಟ ವ್ಯವಹಾರ, ವಿಶಾಲ
ಮನೋಭಾವನೆ, ಶೀಲ, ಧಾರಾಳತನ—ಇವುಗಳನ್ನು ಬೆಳೆಸಿ
ಕೊಂಡಿದ್ದರು. ಅದಲ್ಲದೆ ವೀರರೂ, ಸಾಹಸಿಗಳೂ, ಆರೋಗ್ಯ
ವಂತರೂ, ದೃಢಕಾಯರೂ ಆಗಿದ್ದರು. ಚಳುಕ್ಯ ಅರಸನಾದ
೨ನೇ ಪುಲಿಕೇಶಿಯ ಕಾಲದಲ್ಲಿ ಕನ್ನಡನಾಡಿಗೆ ಯಾತ್ರೆ ಬಂದಿದ್ದ
ಹೂಯೆನ್‌ತ್ಸಾಂಗನು ಕನ್ನಡಿಗರನ್ನು ಕುರಿತು ಅವರಲ್ಲಿದ್ದ
ಉದಾತ್ತ ಗುಣಗಳನ್ನೆಲ್ಲ ವರ್ಣಿಸಿದ್ದಾನೆ. ನೀತಿಯುತ

ಜೀವನ, ಸ್ವಾಮಿನಿಷ್ಠೆಯೂ ಇವರ ದೊಡ್ಡ ಗುಣಗಳು. ಇದಕ್ಕೆ ಪ್ರತಿಕಾಣಿಕೆಯಾಗಿ ಪಾಂಡಿತ್ಯ, ವೀರತ್ವ ಇತ್ಯಾದಿಗಳಿಗೆ ರಾಜಾಶ್ರಯ ದೊರೆಯುತ್ತಿತ್ತು. ಅಂತೆಯೇ ಕನ್ನಡನಾಡಿನಲ್ಲಿ ಅನೇಕ ವಿಭೂತಿಪುರುಷರೂ, ಕರ್ಮಯೋಗಿಗಳೂ ಆಗಿ ಹೋಗಿದ್ದಾರೆ.

ಭಕ್ತಿಮಾರ್ಗಬೋಧಕರಾದ ಶಿವಶರಣರು, ಹರಿದಾಸರು (ಬಸವೇಶ್ವರರು, ಅಕ್ಕಮಹಾದೇವಿ, ಪುರಂದರದಾಸರು, ಕನಕದಾಸರು ಮುಂ.); ಜೈನ, ವೀರಶೈವಕವಿಗಳು (ಪಂಪ, ರನ್ನ, ಅಲ್ಲಮ, ಬಸವೇಶ್ವರ, ಹರಿಹರ, ರಾಘವಾಂಕ, ಕುಮಾರವ್ಯಾಸ, ರತ್ನಾಕರವರ್ಣಿ ಇತ್ಯಾದಿ); ಸಂಸ್ಕೃತ ಕವಿಗಳು (ಶೂದ್ರಕ, ದುರ್ವಿನೀತ, ಶಂಕರ, ಅಮೋಘವರ್ಷ, ಹಲಾಯುಧ, ೩ನೇ ಜಯಸಿಂಹ, ಬಿಲ್ಹಣ, ಸಾಯಣ, ಮಾಧವ, ಗಂಗಾದೇವಿ, ೩ನೇ ಪ್ರೌಢದೇವರಾಯ, ಕೃಷ್ಣದೇವರಾಯ, ಬಸಪ್ಪನಾಯಕ, ನೃಸಿಂಹ ಕವಿ ಇತ್ಯಾದಿ); ಶ್ರೇಷ್ಠ ಸಂಗೀತಕಾರರು; (ಚೈತ್ರಸಿಂಹ, ಸಿಂಗಣ, ಹರಿಪಾಲದೇವ, ನಿಜಗುಣಶಿವಯೋಗಿ, ಪುಂಡರೀಕ ವಿಠಲ, ಪೊನ್ನ, ರನ್ನ ಇತ್ಯಾದಿ) ಮತ್ತು ಇನ್ನೂ ಅನೇಕ ಮಹಾ ಮಹಾಪುರುಷರು ಕನ್ನಡ ಸಂಸ್ಕೃತಿ, ಸಾಹಿತ್ಯ ಮತ್ತು ರಾಜ್ಯಗಳಿಗೆ ತಿಲಕಪ್ರಾಯರಾಗಿದ್ದಾರೆ.

ಕನ್ನಡ ಸಮಾಜದಲ್ಲಿ ಇನ್ನೂ ಕೆಲವು ಪದ್ಧತಿಗಳಿದ್ದವು. ಸಹಗಮನ (ಮಾಸ್ತಿಕಲ್ಲು ಕಟ್ಟಿಸುವುದು), ವೀರರ ಸ್ಮಾರಕ

ಗಳನ್ನು ಕಟ್ಟಿಸುವುದು, ಜೈನರ ಸನ್ಯಸನ, ಗರುಡನಾಗುವುದು ಇತ್ಯಾದಿ.

ಕನ್ನಡಿಗರು ರಸಿಕರು; ಆಟ, ನೋಟ, ಊಟ ಹಬ್ಬಗಳಿಗೆ ಮಹತ್ವಕೊಟ್ಟಿದ್ದರು. ಚೈತ್ರ, ಮಾಘ, ಕಾರ್ತಿಕ ಮಾಸ-ಗಳಲ್ಲಿ ಅನೇಕ ಕಡೆಗಳಲ್ಲಿ ಜಾತ್ರೆ, ಉತ್ಸವ, ರಥೋತ್ಸವ, ತೆಪ್ಪೋತ್ಸವ, ವಸಂತೋತ್ಸವ, ಕಾರಹುಣ್ಣಿಮೆ, ನಾಗಪಂಚಮಿ, ಮಹಾನವಮಿ, ದೀವಳಿಗೆ, ಮಕರಸಂಕ್ರಮಣ, ಶಿವರಾತ್ರಿ-ಹಬ್ಬಗಳನ್ನು ನೆರವೇರಿಸುತ್ತಿದ್ದರು. ಪುರಾತನಕಾಲದಿಂದಲೂ ಹಬ್ಬವಾಗಿ ಆಚರಿಸುತ್ತಿದ್ದ ಮಾನೋಮಿ ಈಗ ದೊಡ್ಡ ನಾಡ-ಹಬ್ಬವಾಗಿದೆ (ದಸರಾ). ಇದು ವಿಜಯನಗರ ಅರಸರಲ್ಲಿ ವೈಭವದಿಂದ ಆಚರಿಸಲ್ಪಟ್ಟು ನಂತರ ಮೈಸೂರು ಅರಸರೂ ಆಚರಿಸಿದರು. ರಾಜ್ಯದ ಕ್ಷೇಮ, ಭದ್ರತೆಗಳಿಗೆ ಪ್ರಜೆಗಳ ಪರವಾಗಿ ರಾಜರು ಇದನ್ನು ಆಚರಿಸುತ್ತಿದ್ದರು. ಈಗ ಪೌರರು ಒಟ್ಟಾಗಿ ಆಚರಿಸುತ್ತಿದ್ದಾರೆ. ಈ ಕಾಲದಲ್ಲಿ ಪಂದ್ಯಗಳು, ಮನರಂಜನ ಕಾರ್ಯಗಳು, ಸಾಂಸ್ಕೃತಿಕ ಚಟುವಟಿಕೆಗಳು ಜರುಗುತ್ತವೆ.

ಭಾರತದ ನಾಗರಿಕತೆ ಮತ್ತು ಸಂಸ್ಕೃತಿಯ ಬೆಳವಣಿಗೆ-ಯಲ್ಲಿ ಕನ್ನಡನಾಡಿನ ಸೇವೆ ಅಗಾಧವಾಗಿರುವುದು. ಈಗಂತೂ ಕನ್ನಡನಾಡು ಒಂದಾಗಿದೆ. ಹಿಂದಿನಂತೆ ಮುಂದೆಯೂ ಕನ್ನಡಿಗರು ಭಾರತದ ಮತ್ತು ವಿಶ್ವದ ಕ್ಷೇಮಕ್ಕೆ, ಏಳಿಗೆಗೆ, ಭದ್ರತೆಗೆ, ದುಡಿಯಲಿ! ಇನ್ನೂ ಹೆಚ್ಚಿನ ದೇಶಾಭಿಮಾನ, ಭಾಷಾಭಿಮಾನ, ಜನಾಭಿಮಾನ ತೋರ್ಪಡಿಸಲಿ!

# ೫. ಉಪಸಂಹಾರ

ನಮ್ಮ ಪೂರ್ವಿಕರು ಅನುಸರಿಸಿದ ಪದ್ಧತಿಗಳಿಗೆ ಪ್ರಾಪಂಚಿಕ, ನೈತಿಕ, ಆಧ್ಯಾತ್ಮಿಕ ಆಧಾರಗಳು ಕಂಡು-ಬರುತ್ತವೆ. ಇಂದಿನ ಭಾರತದ ಸಮಾಜ ಸುಧಾರಕರಲ್ಲಿ ಎರಡು ಗುಂಪುಗಳಿವೆ:– ಒಂದು ಹಿಂದಿನ ಪದ್ಧತಿಗಳನ್ನೆಲ್ಲಾ ನಿರ್ಮೂಲ ಮಾಡಿ ಹೊಸ ಹೊಸ ಸುಧಾರಣೆ ತರಬೇಕೆನ್ನು-ವವರು, ಮತ್ತೊಂದು ಆರ್ಷೇಯವಾಗಿ ನಡೆದುಬಂದಿರತಕ್ಕ ಪದ್ಧತಿಗಳನ್ನು ರಕ್ಷಿಸಿಕೊಳ್ಳಬೇಕೆನ್ನುವವರು. ಇಂದಿನ ಸಾಮಾ-ಜಿಕ ಜೀವನದಲ್ಲಿ ಅನೇಕ ತೊಡಕು, ಅಡ್ಡಿಗಳು ತಲೆದೋರಿವೆ. ಹಳೆಯ ಪದ್ಧತಿಗಳನ್ನೆಲ್ಲಾ ತೊಡೆದುಹಾಕಲು ಸಾಧ್ಯವಿಲ್ಲ; ಧರ್ಮಶಾಸ್ತ್ರ, ಸಾಹಿತ್ಯದಲ್ಲಿ ವರ್ಣಿಸಿರುವ ಅತ್ಯುತ್ತಮವಾದ ಪದ್ಧತಿಗಳನ್ನು ಬೆಳಸಿಕೊಳ್ಳಬೇಕಾಗಿದೆ. ವಿದ್ಯಾರ್ಜನೆ, ನಂತರ ಕುಟುಂಬಜೀವನ, ಕುಟುಂಬದಲ್ಲಿ ಕರ್ತವ್ಯಪಾಲನೆ, ನಂತರ ವಿಶ್ರಾಂತಜೀವನ, ವಾನಪ್ರಸ್ಥ, ಸನ್ಯಾಸ (ಕಡೆಯ ಎರಡು ಆಶ್ರಮಗಳನ್ನು ಮನಸ್ಸಿನ ಒಲವು ಇದ್ದವರು ಮಾತ್ರ ಅನು-ಸರಿಸಬಹುದಿತ್ತು): ಈ ಪದ್ಧತಿಗಳಲ್ಲಿ ಧರ್ಮಕ್ಕೆ ಬೆಲೆ ಇದೆ; ಧರ್ಮವೇ ಉಳಿದ ಮೂರು ಪುರುಷಾರ್ಥಗಳಿಗೆ ಸಾಧನವಾಗಿ

ತನ್ನನ್ನು ತಾನು ಅರಿಯುವುದಕ್ಕಾಗಿ ಸಹಾಯವಾಗುತ್ತಿತ್ತು. ೫೦೦೦ ವರ್ಷಗಳಿಂದಲೂ ಬೆಳೆದು ಬಂದಿರತಕ್ಕ ಹಾಗೂ ಉತ್ಕೃಷ್ಟವೆನಿಸಿದ ಪದ್ಧತಿಗಳನ್ನು ಬಿಡುವುದು ಸಾಧ್ಯವೆ?

ಭೌಗೋಲಿಕ, ಸಸ್ಯವರ್ಗ, ಪ್ರಾಣಿವರ್ಗ, ವಾಯುಗುಣ, ಪ್ರಕೃತಿ ಸಂಪತ್ತು, ಜನಸಾಂದ್ರತೆ ಮೊದಲಾದವುಗಳಲ್ಲಿ ಒಂದು ಭಾಗಕ್ಕೂ ಮತ್ತೊಂದು ಭಾಗಕ್ಕೂ ವ್ಯತ್ಯಾಸವಿರುವುದು ಸಹಜವಾಗಿದೆ. ಕೆಲವರು ಈ ವೈವಿಧ್ಯಗಳನ್ನು ನೋಡಿ ಭಾರತವನ್ನು 'ಎತ್ನಾಲಾಜಿಕಲ್ ಮ್ಯೂಸಿಯಮ್' (ವಿವಿಧ ಬುಡಕಟ್ಟುಗಳ ಸಂಗ್ರಹಾಲಯ) ಎಂದು ಕರೆದಿದ್ದಾರೆ. ಹಾಗೆಯೇ ಅನೇಕ ವರ್ಷಗಳವರೆಗೂ ನಾನಾಬಗೆಯ ಜನ ನಮ್ಮ ದೇಶಕ್ಕೆ ಬಂದು ನೆಲೆಸಿ ಬಾಳಿ ಬದುಕಿರುವರು. ಆದುದ-ರಿಂದ ನಡೆ, ನುಡಿ, ಭಾಷೆ, ಉಡಿಗೆ, ತೊಡಿಗೆಯಲ್ಲಿ ವೈವಿಧ್ಯ ಕಂಡುಬರುವುದರಲ್ಲಿ ಆಶ್ಚರ್ಯವಿಲ್ಲ. ಆದರೆ ಇಷ್ಟೊಂದು ವೈವಿಧ್ಯದ ನಡುವೆಯೂ ದೇಶದಲ್ಲಿ ಒಂದು ಐಕ್ಯತಾಭಾವನೆ ನಮ್ಮ ನಾಡಿನಲ್ಲಿ ಪ್ರವಹಿಸುತ್ತಿರುವುದು. ಈ ಭಾವನೆಗೆ ಅನೇಕ ಕಾರಣಗಳಿವೆ:— ಪ್ರಕೃತಿಯೇ ನಮ್ಮ ದೇಶವನ್ನು ಇತರ ದೇಶಗಳಿಂದ ಬೇರೆ ಮಾಡಿದೆ. ಆದರೆ ಆಸೇತು ಹಿಮಾಚಲ ಪರ್ಯಂತ ವಾಸವಾಗಿರುವ ಭಾರತೀಯರು ತಮ್ಮ ಸಂಸ್ಕೃತಿಯ-ಲ್ಲಿಯೂ, ಜೀವನದಲ್ಲಿಯೂ ಒಂದಾಗಿರುವರು. ಮತ್ತು ಇಂದು ಇಡೀ ಭಾರತದಲ್ಲಿ ಒಂದು ಆಡಳಿತ, ಒಂದು ರಾಷ್ಟ್ರಧ್ವಜ, ಒಂದು ರಾಷ್ಟ್ರಗೀತೆ, ಒಂದು ರಾಷ್ಟ್ರಭಾಷೆಯಿದೆ. ಆದ್ದರಿಂದ ಕರ್ನಾಟಕದವರು, ದ್ರಾವಿಡರು, ಬಂಗಾಲದವರು, ಗುಜರಾಥಿ-

ಗಳು, ಮರಾಟಿಗರು— ಎಲ್ಲರೂ ಒಂದೇ ಎಂಬ ಭಾವನೆ
ಪ್ರಬಲವಾಗುತ್ತಿದೆ; ಮತ್ತಷ್ಟು ಪ್ರಬಲವಾಗಬೇಕು. ನಮ್ಮ
ದೇಶದ ವೈವಿಧ್ಯದ ನಡುವೆ ನಾವು ಐಕ್ಯತೆಯನ್ನು ಸ್ಥಾಪಿಸಿ-
ದ್ದೇವೆ. ಈ ಐಕ್ಯತೆಯನ್ನು ದೃಢಪಡಿಸಿ ಶಾಶ್ವತಗೊಳಿಸಬೇಕು.
ಹಿಂದೆಯೂ ನಮ್ಮ ದೇಶಕ್ಕೆ ಭಾರತವರ್ಷ ಎಂಬ ಹೆಸರು
ಬಂದಿದೆ. ಅಧಿರಾಜ, ಚಕ್ರವರ್ತಿ ಎಂಬ ಬಿರುದುಗಳು ದೇಶದ
ಐಕ್ಯತೆಯನ್ನು ಸೂಚಿಸುತ್ತವೆ. ರಾಜಕೀಯ ಐಕ್ಯತೆಯ
ದೃಷ್ಟಿಯಿಂದ ಅಶೋಕನ ಕಾಲವನ್ನು ಉಳಿದು ಭಾರತವು
ಈಗಲೇ ಒಂದಾಗಿರುವುದು. ಆದರೂ ಪ್ರಾಚೀನಕಾಲದಲ್ಲಿ
ಪರಕೀಯರಲ್ಲಿ ಕಾಣಬಂದ ಉತ್ತಮ ಅಂಶಗಳನ್ನೆಲ್ಲ ಭಾರತೀಯ
ಸಂಸ್ಕೃತಿ ಅಳವಡಿಸಿಕೊಂಡು ತನ್ನ ಹಿರಿಮೆಯನ್ನು ಕಳೆದುಕೊಳ್ಳದೆ
ಇದೆ.

ಭಾರತದ ಪ್ರಾಚೀನ ಪದ್ಧತಿಗಳು ಟೀಕೆಗೊಳಗಾಗಿವೆ.
ಆದರೆ ಈ ಟೀಕೆಗಳಲ್ಲಿ ಆಧಾರ ಕಡಿಮೆ. ವೇದಗಳು ಅಸಹನೆ
ಯನ್ನು ಹೇಳಿಲ್ಲ. ಮತದ ಹೆಸರಿನಲ್ಲಿ ದುಷ್ಟಕಾರ್ಯ ನಡೆಸಿಲ್ಲ.
ಏಕೆಂದರೆ ಆಗಿನ ಜನರು ಮುಖ್ಯ ತತ್ವಗಳನ್ನನುಸರಿಸುತ್ತಿದ್ದರು.
ಅವು "Live and Let Live" ಮತ್ತು "Plain Living
and High Thinking" ಸರಳ ಜೀವನ-ಉನ್ನತ ಚಿಂತನ. ಆದರೆ
ಈಗಿನಯುಗ ವಿಜ್ಞಾನಯುಗ. ಅಣುಬಾಂಬು ಸ್ಪುಟ್ನಿಕ್‌ಗಳ
ಯುಗ; ಅಣುಬಾಂಬನ್ನು ಉಪಯುಕ್ತ ಕಾರ್ಯಗಳಿಗೆ ಪ್ರಯೋ
ಗಿಸುತ್ತಿರುವ ಯುಗ; ರೋಗ ಬಹುಮಟ್ಟಿಗೆ ಹಿಡಿತಕ್ಕೆ ಸಿಕ್ಕಿ ಪರಿ
ಹಾರ ದೊರೆಯುತ್ತಿರುವ ಯುಗ. ಇಂಥ ಯುಗದಲ್ಲಿ ವಿಜ್ಞಾನದ
ಸೌಲಭ್ಯಗಳನ್ನು ನಾವು ಉಪಯೋಗಿಸದಿದ್ದರೆ ಕಣ್ಣಿದ್ದೂ,

ಇಲ್ಲದಂತೆ. ಆದ್ದರಿಂದ ನಮ್ಮ ದೈನಂದಿನ ಜೀವನದಲ್ಲಿ ಸಾಧ್ಯವಾಗುವಷ್ಟು ವಿಜ್ಞಾನ ಕೊಟ್ಟಿರುವ ಉಪಕರಣಗಳನ್ನು ಉಪಯೋಗಿಸೋಣ; ಊಳುವುದಕ್ಕೆ ನೇಗಿಲ ಬದಲು ಟ್ರ್ಯಾಕ್ಟರುಗಳನ್ನು ಉಪಯೋಗಿಸೋಣ; ಆದರೆ ಸಮಾಜದಲ್ಲಿ ಸಂಸ್ಕೃತಿಯ ಪರಿಣಾಮವಾಗಿ ಒಮ್ಮನಸ್ಸನ್ನು ತರುವ ಉತ್ತಮ ಪದ್ಧತಿಗಳನ್ನು ಕಡೆಗಣಿಸುವುದು ತಪ್ಪಾಗುತ್ತದೆ.

ಭಾರತ ಇತಿಹಾಸವು ನಮಗೆ ವಿವೇಕವನ್ನು ಕಲಿಸುತ್ತದೆ. ಈ ದೇಶದ ಸಂಸ್ಕೃತಿಯ ಇತಿಹಾಸದಲ್ಲಿ ಸಾಮಾಜಿಕ ಕ್ಷೇತ್ರದ ಅತ್ಯಂತ ಸಣ್ಣ ನೋಟವೊಂದನ್ನು ಈ-ವರೆಗೆ ವರ್ಣಿಸಿದ್ದೇನೆ. ಪರಕೀಯ ದಾಳಿಕಾರರಾಗಿದ್ದ ಶಕ, ಕುಶಾಣ ಮೊದಲಾದವರು ಈ ದೇಶದಲ್ಲಿ ವಾಸವಾಗಿದ್ದಾಗ, ನಮ್ಮ ದೇಶದ ನಾಗರಿಕತೆ, ಸಂಸ್ಕೃತಿಯನ್ನು ಕಂಡು ಭಾರತೀಯ ಮನೋಭಾವನೆಯನ್ನೇ ಹೊಂದಿದರು; ನಮ್ಮ ದೇಶದ ಸಂಸ್ಕೃತಿಯ ವರ್ಚಸ್ಸಿಗೆ ಒಳಗಾಗಿ ಭಾರತೀಯರಾದರು. ಯಾವ ರೀತಿಯಲ್ಲೂ ಅಂತರರಾಷ್ಟ್ರೀಯ ಸಮಸ್ಯೆಗಳು ಉಲ್ಬಣಗೊಳ್ಳುವುದಕ್ಕೆ ಕಾರಣವಾಗದೇ, ಸಮಸ್ಯೆಗಳ ನಿವಾರಣೆಗೆ ವಿಧಾಯಕವಾಗಿ ಪ್ರಯತ್ನಿಸುತ್ತಿರುವ ಭಾರತದ ತಟಸ್ಥ ನೀತಿ ಅಮೂಲ್ಯವೆನಿಸಿದೆ. ಹೀಗಿರುವಲ್ಲಿ ಅಖಂಡವೂ, ಅನಾದಿಯೂ ಎನಿಸಿರುವ ಭಾರತೀಯ ಸಂಸ್ಕೃತಿಯಲ್ಲಿನ ವಿಶಿಷ್ಟತೆಯ ದೃಷ್ಟಿಯಿಂದ ಇದುವರೆಗೆ ತಿಳಿಸಿರುವ ಸಾಮಾಜಿಕ ಚಿತ್ರವು ವಾಚಕರಲ್ಲಿ ಮತ್ತೂ ಹೆಚ್ಚಿನ ವಿಷಯಗಳನ್ನು ತಿಳಿಯಬೇಕೆಂಬ ಕುತೂಹಲವನ್ನುಂಟುಮಾಡಿದ್ದರೆ ಈ ಪ್ರಯತ್ನ ಸಾರ್ಥಕವಾದಂತೆ.

# ಪರಿಶಿಷ್ಟ

## (ಐತಿಹಾಸಿಕ ಕಾಲಗಳಲ್ಲಿನ ಸಾಮಾಜಿಕ ಜನಜೀವನ)

೧. **ಪುರಾತನ ಕಾಲ** [ಕ್ರಿ. ಪೂ. ೨೫೦೦೦–೫೦೦೦–೨೨೦೦ ] ಪಂಜಾಬು, ಸಿಂಧೂ ಮತ್ತು ಸೋಣಾ ನದೀ ಸೀಮೆ, ಗುಜರಾಥ್, ಕರ್ನಾಟಕದಲ್ಲಿ ಮಲಪ್ರಭಾ ಪ್ರದೇಶ, ಚಿಂಗಲ್ ಪಟ್ ಜಿಲ್ಲೆ– ಇತ್ಯಾದಿ ಪ್ರದೇಶಗಳಲ್ಲಿ ಪುರಾತನ ಮನುಷ್ಯನ ವಾಸ; ಹಳೇ ಶಿಲಾಯುಗ, ನೂತನ ಶಿಲಾಯುಗಗಳ ನಾಗರಿಕತೆ; ಆಗಿನ ಕಾಲದಲ್ಲಿ ಉಪಯೋಗಿಸಲ್ಪಡುತ್ತಿದ್ದು ಈಗ ದೊರೆತಿರುವ ಅವಶೇಷಗಳ ಪರಿಶೀಲನೆಯಿಂದ ಜೀವನ ಸ್ಥಿತಿಯ ನಿರ್ಧಾರ; ಕಲ್ಲಿನ ಕೈಕೊಡಲಿಯಿಂದ ಗಡ್ಡೆ ಗೆಣಸು ತೆಗೆಯುವುದು; ಮರಕಡಿಯುವುದು, ಪ್ರಾಣಿಗಳನ್ನು ಕತ್ತರಿಸುವುದು, ಆಹಾರ ಕೂಡಿಸುವುದು, ಇಂತಹ ಕೆಲಸಗಳಿಗೆ ಉಪಯೋಗ; ಮೈಕ್ರೋಲಿಥಿಕ್ ಯುಗದಲ್ಲಿ ನಯವಾದ, ಚೂಪಾದ, ಕಲ್ಲಿನ ಆಯುಧಗಳ ಉಪಯೋಗ. ಮಾನವನ ದೈಹಿಕ ಬೆಳವಣಿಗೆ ನೀಳವಾಗಿತ್ತು, ಬೆಂಕಿಯ ಉಪಯೋಗ ತಿಳಿದಿತ್ತು. ಉಳಿ,

ಸಲಿಕೆಯ ಉಪಯೋಗ ತಾಮ್ರ ಕಬ್ಬಿಣದ ಉಪಯೋಗ ಗೊತ್ತಿರಲಿಲ್ಲ. ಆದರೂ ನಾಗರಿಕರಾಗಿದ್ದರು. ವ್ಯವಸಾಯ ಮಣ್ಣಿನ ಮಡಕೆ ತಯಾರಿಕೆ; ವ್ಯವಸ್ಥಿತ ಜೀವನ, ಗುಹೆಗಳ ಗೋಡೆಗಳ ಮೇಲೆ ನರ್ತನ ಚಿತ್ರ, ಅಥವಾ ಬೇಟೆ ಚಿತ್ರ ಬರೆಯುವುದು, ನೂಲುವಿಕೆ, ದೋಣಿಮಾಡುವುದು, ಡೋಲ್ ಮನ ಎಂಬ ಕಲ್ಲಿನ ಕಟ್ಟಡಗಳಿಂದ ತಿಳಿದು ಬರುವುದೇನಂದರೆ ಸತ್ತವರನ್ನು ಹೂಳುವ ಪದ್ಧತಿ ಇತ್ತು; ದಕ್ಷಿಣದಲ್ಲಿ ಈ ಶಿಲಾಯುಗದ ನಾಗರೀಕತೆಯು ಕ್ರಿ. ಪೂ. ೩೦೦ಕ್ಕೆ ಮುಗಿಯಿತು. ಉತ್ತರದಲ್ಲಿ ಶಿಲಾಯುಗಾನಂತರ ತಾಮ್ರ, ಮತ್ತು ಕಬ್ಬಿಣ ಯುಗಗಳ ಪ್ರಾರಂಭ.

* * *

**೨. ಸಿಂಧೂ ನದೀ ಬಯಲಿನ ನಾಗರಿಕತೆ:** (ಕ್ರಿ.ಪೂ. ೩೨೫೦–೨೭೫೦) ೧೯೨೧ ರಲ್ಲಿ ಸಿಂಧ ಪ್ರಾಂತ್ಯದ ಮೊಹೆಂಜೊ ದಾರೋ ಮತ್ತು ಪಂಜಾಬದ ಹರಪ್ಪಾ ಎಂಬ ಪಟ್ಟಣಗಳಲ್ಲಿ ನಡೆದ ಚಾರಿತ್ರಿಕ ಸಂಶೋಧನೆಗಳಿಂದ ಭಾರತದ ನಾಗರೀಕತೆ ಹಾಗೂ ಇತಿಹಾಸವು ಅತ್ಯಂತ ಪ್ರಾಚೀನ ಕಾಲದಿಂದ ಪ್ರಾರಂಭ ವಾಯಿತೆಂಬ ಸ್ಪಷ್ಟ ತಿಳುವಳಿಕೆ ಮೂಡಿತು; ನಗರ ಜೀವನ; ಸುಟ್ಟ ಇಟ್ಟಿಗೆಗಳಿಂದ ಮನೆಗಳನ್ನು ಕಟ್ಟುವಿಕೆ; ಮೊಹೆಂಜೋ ದಾರೋವಿನಲ್ಲಿ ಈಜುವ ಕೊಳ, ಸೌಧ; ಉತ್ಕೃಷ್ಟವಾದ ಮಣ್ಣಿನ ಪಾತ್ರೆಗಳ ತಯಾರಿಕೆ; ಬೆಲೆಬಾಳುವ ಕಲ್ಲಿನ ಉಪಯೋಗ; ಹತ್ತಿಯಿಂದ ಮಾಡಿದ ಅರಿವೆಗಳ ಉಪಯೋಗ; ಗೋಧಿ,

ಬಾರ್ಲಿ, ಮೀನು, ಮಾಂಸ–ಇವು ಆಹಾರ ವಸ್ತುಗಳು; ಓದುವಿಕೆ ಮತ್ತು ಬರೆಯುವಿಕೆ (ಪಿಟ್ರೋಗ್ರಾಫ್); ನಯವಾದ ಬಿಳುಪಿನ ಬಿಲ್ಲೆಗಳ ( Seals ) ತಯಾರಿಕೆ; ಈ ಬಿಲ್ಲೆಗಳು ಮೆಸೋಪೊಟೇಮಿಯಾ, ಎಲಾಂನಲ್ಲಿ ಸಿಕ್ಕಿವೆ; ಬಿಲ್ಲೆಯ ಚೌಕಗಳಲ್ಲಿ ಕೆಲವು ಚಿಹ್ನಗಳು; ನಡುವೆ ಯಾವುದಾದರೊಂದು ಚಿತ್ರ– ಉದಾ : ಖಡ್ಗಮೃಗ; ಪಶುಪತಿ; ನಂದಿ; ಆನೆ ಇತ್ಯಾದಿಗಳ ಉತ್ತಮ ಚಿತ್ರ; ಹಿಂದೂ ಧರ್ಮದ ಪದ್ಧತಿಗಳು ಆಚರಣೆಯಲ್ಲಿದ್ದವು; ತ್ರಿಶೂಲ ಧರಿಸಿರುವ ಶಿವ (ಪಶುಪತಿ), ಅಶ್ವತ್ಥಮರ, ಭೂದೇವಿ, ನೀರು ಇವುಗಳ ಪೂಜೆಯ ರೂಢಿ; ನೆರೆಹೊರೆಯ ರಾಜ್ಯಗಳಾದ ಮೆಸೋಪೊಟೇಮಿಯಾದೊಡನೆ ವ್ಯಾಪಾರ; ಸ್ತ್ರೀಯರ ಬಳೆ, ಸರ, ಉಂಗುರ, ಮೂಗುತಿ, ಕಿವಿಯ ಆಭರಣಗಳು ಬಳಕೆಯಲ್ಲಿದ್ದವು; ವಿಧವಿಧವಾದ ಕೇಶಾಲಂಕಾರಗಳ ಅರಿವು; ಸಿಂಧೂನದಿಯ ಸಭ್ಯತೆ ಹಾಗೂ ಹೆಸರಿನಿಂದ ದೇಶಕ್ಕೆ ಸಿಂಧೂ ದೇಶ ಎಂಬ ಹೆಸರು;

* * *

## ೩. ವೇದಗಳ ಕಾಲ: (ಕ್ರಿ. ಪೂ. ೨೦೦೦–೧೦೦೦)

ಆರ್ಯರ ಪೂರ್ವನಿವಾಸದ ವಿಚಾರದಲ್ಲಿ ಭಿನ್ನಾಭಿಪ್ರಾಯ; ಇಂಡೋ-ಯುರೋಪಿಯನ್ನರ ಬುಡಕಟ್ಟಿನವರು; ಎತ್ತರವಾಗಿಯೂ ದೃಢಕಾಯರಾಗಿಯೂ ಸ್ಫುರದ್ರೂಪಿಗಳಾಗಿಯೂ ಇದ್ದರು; ಸಪ್ತ ಸಿಂಧುವಿನಲ್ಲಿ ನೆಲೆಸುವಿಕೆ; ಹಿಮಾಲಯ

ಪರ್ವತ ಸೀಮೆಯ ಹೆಸರೂ ಆರ್ಯರಿಗೆ ತಿಳಿದಿತ್ತೆಂಬ ಅಂಶ; ಇವರ ಪುರಾತನ ಗ್ರಂಥ ಋಗ್ವೇದ; ವೇದ ಅಂದರೆ ಜ್ಞಾನ; ಋಗ್ವೇದ ನಂತರ ಇತರ ಮೂರು ವೇದಗಳು ರಚಿಸಲ್ಪಟ್ಟವು; ಮತ್ತು ಬ್ರಾಹ್ಮಣ, ಆರಣ್ಯಕ, ಉಪನಿಷತ್ತುಗಳು ಮತ್ತು ಸೂತ್ರಗಳು ರಚಿಸಲ್ಪಟ್ಟವು. ಆರ್ಯರು ಗ್ರಾಮವಾಸಿಗಳು; ಗ್ರಾಮ ಮುಖ್ಯಸ್ಥ ಹಾಗೂ ಗ್ರಾಮಣಿ ಎಂಬ ಅಧಿಕಾರಿಗಳ ಹೆಸರುಗಳ ಉಲ್ಲೇಖ; 'ದಸ್ಯು'ಗಳೊಡನೆ ಯುದ್ಧ ಮಾಡುತ್ತಿದ್ದರು; ಪಿತೃ ಪ್ರಧಾನವಾದ ಕುಟುಂಬ; ಪಂಗಡಗಳು ಮತ್ತು ಪಂಗಡಗಳ ಪ್ರಮುಖ ಅಥವಾ 'ರಾಜ'; ಸೈನ್ಯ ವ್ಯವಸ್ಥೆಯ ಮುಖ್ಯಸ್ಥ ಸೇನಾನಿ; ವರ್ಣಾಶ್ರಮ ಧರ್ಮ ಪದ್ಧತಿ; ಪಶುಪಾಲನೆ, ವ್ಯವಸಾಯ, ಗೋ ಸಾಕುವಿಕೆ, ಮುಖ್ಯ ಕಸಬುಗಳು; ಗೋವಿನ ಚರ್ಮವನ್ನು ನೀರು, ಜೇನು, ಎಣ್ಣೆ, ತುಪ್ಪ ಇಡುವುದಕ್ಕೆ ಉಪಯೋಗ; ರಥಕ್ಕೆ ಕುದುರೆಗಳ ಉಪಯೋಗ; ಬಾವಿಯಿಂದ ನೀರು ಹಾಯಿಸುವಿಕೆ; ಬಂಡಿಗಳಿಗೆ ಕತ್ತೆಯ ಉಪಯೋಗ; ಮೇಕೆ ಹಾಲು, ಮೀನು ಉಪಯೋಗ; ರಥಗಳನ್ನು ಓಡಿಸುವುದು, ಜೂಜು, ಸಂಗೀತ, ಇವು ಮನರಂಜನ ಆಟಗಳು; ಗ್ರಾಮದ ಮನೆಗಳಲ್ಲಿ ನಡುವೆ ಪಂಚಾಯತರ ಮನೆಯಿತ್ತು; ಗ್ರಾಮದ ವ್ಯವಹಾರಗಳನ್ನು ಪಂಚಾಯತರು ತೀರ್ಮಾನಿಸುತ್ತಿದ್ದರು; ಮಣ್ಣಿನ ಪಾತ್ರೆಗಳು–ಮಡಿಕೆ, ಹೂಜಿ–ಬಳಕೆಯಲ್ಲಿದ್ದವು. ಬಾರ್ಲಿ, ಹಾಲು, ಕಾಯಿಪಲ್ಲೆ (ಗಡ್ಡೆಗೆಣಸು), ಹಣ್ಣು, ಜೇನು, ಮೊಸರು–ಇವು ಆಹಾರ ಪದಾರ್ಥಗಳು; ಸತ್ತವರನ್ನು ಹೂಳುವುದು, ಅಥವಾ ಸುಡುವುದು ಪದ್ಧತಿ; ಚಕ್ರವರ್ತಿಗಳೆನಿಸಿದವರು ಅಶ್ವಮೇಧ, ರಾಜ

ಸೂಯ ಮೊದಲಾದ ಯಾಗಗಳನ್ನು ನೆರವೇರಿಸುತ್ತಿದ್ದರು; ಸಮಿತಿ, ಸಭೆಗಳೆಂಬ ಪ್ರಜಾಸಂಸ್ಥೆಗಳಿಂದ ಆಡಳಿತದ ನಿಯಂತ್ರಣ.

* * *

**೪. ಮಹಾ ಕಾವ್ಯಗಳ ಕಾಲ :** (ಕ್ರಿ.ಪೂ. ೧೦೦೦–೬೦೦.) ಆರ್ಯರು ವಿಂಧ್ಯ ಶ್ರೇಣಿಯ ದಕ್ಷಿಣ ಪ್ರದೇಶಕ್ಕೆ ಬಂದದ್ದು; ಮಹಾಕಾವ್ಯಗಳೆನಿಸಿರುವ ಮಹಾಭಾರತ, ರಾಮಾಯಣ, ಉದ್ಗ್ರಂಥಗಳು ಆಗಿನ ಕಾಲದ ಸ್ಥಿತಿಯನ್ನು ವರ್ಣಿಸುತ್ತವೆ; ಕ್ಷತ್ರಿಯರ ಕಾರ್ಯಗಳ ವರ್ಣನೆ. ರಾಜನು ಸೈನ್ಯ ಸಮುದಾಯದ ಮುಖಂಡ ಹಾಗೂ ಪ್ರಧಾನ ವ್ಯಕ್ತಿ; ಪ್ರಜಾಯೋಗಕ್ಷೇಮ, ನ್ಯಾಯ ಪರಿಪಾಲನೆ ಅರಸನ ಮುಖ್ಯ ಕರ್ತವ್ಯಗಳು; ಅರಸನೇ ಆದರ್ಶಮಯ ಜೀವನ ನಡೆಸಿ ಮಾರ್ಗದರ್ಶಿಯಾಗಿರಬೇಕೆಂಬ ನಿಬಂಧನೆ. ಯುದ್ಧಗಳು ತಲೆದೋರುತ್ತಿದ್ದರೂ ಪ್ರಜೆಗಳಲ್ಲಿ ಸುಸೂತ್ರ ಹಾಗೂ ಸರಳ ಜೀವನ ಸ್ಥಿತಿಯ ವ್ಯವಸ್ಥೆ; ಯುದ್ಧ ಭಯದಿಂದ ಪ್ರಜೆಗಳ ರಕ್ಷಣೆ; ಬೀದಿಗಳಲ್ಲಿ ನೀರಿನ ಪೂರೈಕೆ ಹಾಗೂ ದೀಪಗಳ ಸೌಕರ್ಯ; ಅರಸನ ಅರಮನೆ ಪಟ್ಟಣದ ನಡುವೆ; ಸಮೀಪದಲ್ಲಿಯೇ ನ್ಯಾಯಾಲಯ, ಕ್ರೀಡಾರಂಗ; ವಿಶಾಲವಾದ ಕೋಣೆಯಲ್ಲಿ ಅತಿಥಿಗಳ ಸ್ವೀಕಾರ; ರಾಜನ ಅರಮನೆಯಲ್ಲಿ ಜೂಜು ಪ್ರಿಯವಾದ ಆಟ; ಔತಣ ಕೂಟಗಳ ಏರ್ಪಾಟು; ಅರಳೆ ಹಾಗೂ ಉಣ್ಣೆ ಬಟ್ಟೆಗಳ ಉಪಯೋಗ; ಕೇಶಾಲಂಕಾರ.

ರಾಜನಾದಿಯಾಗಿ ಎಲ್ಲರೂ ತಮ್ಮ ತಮ್ಮ ಕರ್ತವ್ಯಗಳ ಪಾಲನೆ, ಸಮಾಜದ ಕಟ್ಟುಗಳಿಗೆ ಅಧೀನರಾಗಿರುವ ಪದ್ಧತಿ; ಕಾವ್ಯಗಳಲ್ಲಿ ವರ್ಣಿಸಲ್ಪಟ್ಟಿರುವ ಆದರ್ಶಗಳು ಪಾಲನೆಯಲ್ಲಿದ್ದುದು ವ್ಯಕ್ತವಾಗುತ್ತದೆ. ಆಧುನಿಕ ಕಾಲದಲ್ಲಿಯೂ ಮಹಾಕಾವ್ಯಗಳ ಉಪಯುಕ್ತತೆ, ಸ್ಫೂರ್ತಿ ಮತ್ತು ಸಂದೇಶ.

* * * *

### ೫.ಮೌರ್ಯರ ಕಾಲ (ಕ್ರಿ.ಪೂ.೩೨೨–೧೮೧)

ಕ್ರಿ.ಪೂ.೬ನೆಯ ಶತಮಾನದಲ್ಲಿ ೧೬ ಜನಪದಗಳು (ಸೋಲಿಸ ಮಹಾಜನಪದಗಳು) ಸ್ಥಾಪನೆಯಲ್ಲಿದ್ದವು; ಕೋಸಲ, ವಿದೇಹ, ಮಗಧ ಮುಖ್ಯವು; ಅರಸೊತ್ತಿಗೆಯಲ್ಲದ ಗಣರಾಜ್ಯಗಳಲ್ಲಿ ಪರಿಷತ್ತು, ಸಮಸ್ತಾಗಾರ ಮೊದಲಾದ ಸಭೆಗಳು.

ಮಗಧ ರಾಜ್ಯದ ಪ್ರಾಬಲ್ಯ; ಬಿಂಬಿಸಾರನು ಪ್ರಥಮ ಅರಸನು; ಈತನಿಂದ ರಾಜಗೃಹವೆಂಬ ನಗರ ನಿರ್ಮಾಣ; ಮಹಾವೀರ ಮತ್ತು ಗೌತಮಬುದ್ಧರ ಧರ್ಮ ಪ್ರಸಾರಣೆ.

ಕ್ರಿ. ಪೂ. ೩೨೧ರಲ್ಲಿ ಚಂದ್ರಗುಪ್ತನಿಂದ ಮೌರ್ಯ ಸಾಮ್ರಾಜ್ಯ ಸ್ಥಾಪನೆ; ೧೮೪ ರ ವರೆಗೆ ಪ್ರಬಲವಾಗಿತ್ತು; ಚಾಣಕ್ಯನ ಸಲಹೆಗಳಿಂದಾಗಿ ಸುವ್ಯಸ್ಥಿತವಾದ ಮತ್ತು ದಕ್ಷತೆಯಿಂದ ಕೂಡಿದ ಆಡಳಿತ ವ್ಯವಸ್ಥೆ; ಮೆಗಾಸ್ತನೀಸನ ರಾಯಭಾರ ಮತ್ತು ಬರವಣಿಗೆ; ಪಾಟಲಿಪುತ್ರ, ಸಮಾಜದಲ್ಲಿನ ವರ್ಗಗಳು, ರಾಜ್ಯದ ಭೌಗೋಲಿಕ ಲಕ್ಷಣಗಳು, ಉತ್ಪನ್ನಗಳ

ವರ್ಣನೆ ದೊರೆಯುತ್ತವೆ; ಮೆಗಾಸ್ತನೀಸನ 'ಇಂಡಿಕಾ' ಎಂಬ ಗ್ರಂಥದಲ್ಲಿ ಏಳು ಸಾಮಾಜಿಕ ವರ್ಗಗಳಿದ್ದುವೆಂದು ಉಲ್ಲೇಖ; ಚಾತುರ್ವರ್ಣ್ಯ ಪದ್ಧತಿಯ ಸಡಿಲಿಕೆ; ಏಳುವರ್ಗಗಳಲ್ಲಿ ತತ್ವಜ್ಞಾನಿಗಳು, ಪಶುಪಾಲಕರು, ಗೃಹಸ್ಥರು, ಬೇಟೆಗಾರರು, ಸಲಹೆಗಾರರು, ತೀರ್ಪುಗಾರರು, ಕಲೌಪಾಸಕರು, ಯೋಧರು ಮತ್ತು ಮೇಲ್ವಿಚಾರಕರು–ಇವರಲ್ಲಿ ಎಲ್ಲವೂ ಸಮಾಜ ವರ್ಗಗಳೆಂಬ ಮೆಗಾಸ್ತನೀಸನ ತಪ್ಪು ಕಲ್ಪನೆ; ರಾಜನ ಉಡಿಗೆ, ತೊಡಿಗೆ, ವೈಭವ, ಆಡಳಿತ ವ್ಯವಸ್ಥೆ, ರಾಜನೀತಿ, ರಾಜ್ಯದ ಅಂತ್ಯ ಗುರಿ, ಇತ್ಯಾದಿ ವಿಚಾರಗಳು ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಅಡಕವಾಗಿವೆ; ಆಡಳಿತ ಕ್ರಮ ಆಧುನಿಕ ರೀತಿಯಂತಿತ್ತು; ಮುನಿಸಿಪಲ್, ಸೈನ್ಯ ವ್ಯವಸ್ಥೆ, ಜನಗಣತಿ, ಮರ (ಕಟ್ಟಿಗೆ) ದಿಂದ ಮನೆಗಳ ನಿರ್ಮಾಣ; ಬೆಂಕಿ ತಗಲುವ ಮುನ್ನ ಎಚ್ಚರಿಕೆಯ ಕಾರ್ಯಕ್ರಮಗಳು, ಚೊಕ್ಕಟವಾದ ಬೀದಿಗಳು, ರಾಜಪಥ ಎಂಬ ವಿಶಾಲ ರಸ್ತೆಯು ಇದ್ದದ್ದು; ಬೀದಿಯಲ್ಲಿ ಕಸ (ಹೊಲಸು) ಹಾಕಿದವರಿಗೆ ಶಿಕ್ಷೆ; ರಸ್ತೆಗಳಲ್ಲಿ ಊರುಗಳನ್ನು ತೋರಿಸುವ ಕೈಮರಗಳು; ನಾಣ್ಯಗಳ (Punch-marked) ಚಲಾವಣೆ; ಗ್ರಾಮಜೀವನದ ಪ್ರಾಧಾನ್ಯತೆ; ವಸತಿಗೃಹಗಳು; ಪ್ರಜೆಗಳ ಮನಸ್ಸನ್ನು ಚದುರಿಸುವ ಕ್ರೀಡೆಗಳ ನಿರ್ಬಂಧ, ಅಕ್ಕಿಯನ್ನು ಮುಖ್ಯ ಆಹಾರ ವಸ್ತುವನ್ನಾಗಿ ಉಪಯೋಗಿಸುವುದು. ಕ್ರಿ. ಪೂ. ೨೭೫ ರಲ್ಲಿ ಪಟ್ಟಕ್ಕೆ ಬಂದ ಅಶೋಕ ಮೌರ್ಯನ ಕಾಲದಲ್ಲಿ ಮದ್ಯಪಾನ ಮತ್ತು ಮಾಂಸ ಭಕ್ಷಣ ನಿರೋಧ; ಕಲಿಂಗ ಯುದ್ಧಾನಂತರ ಯುದ್ಧವನ್ನು ಬಹಿಷ್ಕರಿಸಿ ಶಾಂತಿ ಧರ್ಮಗಳ ಅಡಿಗಲ್ಲಿನ ಮೇಲೆ ಆಡಳಿತ ವ್ಯವಸ್ಥೆ; ಬೌದ್ಧ

ಮತ ಪ್ರಚಾರ; ಪ್ರಜೆಗಳು ಕರ್ತವ್ಯ ಮತ್ತು ಧರ್ಮ ಪಾಲನೆ; ಸಮದರ್ಶಿತ್ವ, ಮತ ಸಹಿಷ್ಣುತೆ; ಅಶೋಕನ ಶಾಸನಗಳು ದೇಶದ ನಾನಾ ಭಾಗಗಳಲ್ಲಿ ದೊರಕಿವೆ. ಅವುಗಳಿಂದ ರಾಜ್ಯದ ವಿಸ್ತಾರ ತಿಳಿದು ಬರುತ್ತದೆ. ಮತ್ತು ಪ್ರಜಾಪಾಲನೆಯಾಗುತ್ತಿದ್ದ ರೀತಿಯನ್ನು ವರ್ಣಿಸುತ್ತವೆ; ಜೀವಂತ ಪ್ರಾಣಿಗಳಿಗೆ ದಯೆ ತೋರುವಿಕೆ, ಮಾನವನಿಗೂ. ಪ್ರಾಣಿಗಳಿಗೂ, ಔಷಧಾ-ಲಯಗಳ ಸೌಕರ್ಯ, ವ್ಯವಸಾಯಕ್ಕೆ ನೀರಾವರಿ ಸೌಕರ್ಯ, ಪ್ರಜಾ ಕಲ್ಯಾಣ ರಾಜ್ಯ ಸ್ಥಾಪನೆ, ಈ ಕಾರಣಗಳಿಗಾಗಿಯೇ ಆಧುನಿಕ ಸ್ವತಂತ್ರ ಭಾರತದ ಪರರಾಷ್ಟ್ರ ಧೋರಣೆಯು ಪಂಚ ಶೀಲ ತತ್ವಗಳನ್ನೇ ಅವಲಂಬಿಸಿದೆ; ರಾಷ್ಟ್ರಧ್ವಜದಲ್ಲಿ, ಸಾಂಚಿಯ ಅಶೋಕ ಸ್ತಂಭದಲ್ಲಿನ ಚಕ್ರವನ್ನು ಅಳವಡಿಸಲಾಗಿದೆ. ವ್ಯಾಪಾರ ಕ್ಷೇತ್ರದಲ್ಲಿ ವರ್ತಕ ಶ್ರೇಷ್ಠಿಗಳ ಪ್ರಾಮುಖ್ಯತೆ. ನಗರ ಜೀವನ, ನಾಗರಿಕರ ಜೀವನವು, ವಾತ್ಸ್ಯಾಯನನ ವರ್ಣನೆಯ ಪ್ರಕಾರ ಸಂತೋಷಮಯವಾಗಿಯೂ ಸುಖಮಯ ವಾಗಿಯೂ ಇತ್ತು ! ಮನೆಗಳು, ಎಲ್ಲ ಅನುಕೂಲತೆಗಳಿಂದ ಸುಸಜ್ಜಿತವಾಗಿದ್ದವು! ಅಲಂಕಾರ ವಸ್ತುಗಳ ಉಪಯೋಗ; ಈಗಿನಂತೆ ಕುರ್ಚಿಗಳಿಲ್ಲದಿದ್ದರೂ ಜಮಖಾನೆಗಳ ಉಪ-ಯೋಗ ಹೆಚ್ಚಾಗಿತ್ತು. ಸುಗಂಧ ದ್ರವ್ಯಗಳ ಬಳಕೆ; ಉತ್ತಮ ವಸ್ತ್ರಗಳ ಧರಿಸುವಿಕೆ; ಶರೀರದ ಆರೋಗ್ಯಕ್ಕಾಗಿ ವ್ಯಾಯಾಮದ ಮತ್ತು ಮೈ ತಿಕ್ಕುವಿಕೆಯ ಆವಶ್ಯಕತೆಯ ಅರಿವು; ಮಧುಸೇವನೆ; ಗ್ರಾಮ ಜೀವನಕ್ಕೂ ನಗರ ಜೀವ ನಕ್ಕೂ ಅಂತರ; ಋತುಗಳನ್ನು ಅನುಸರಿಸಿ ಬರುವ ಹಬ್ಬಗಳ

ಆಚರಣೆ; ಜೂಜು, ಚೆಂಡಾಟ, ಪಗಡೆ, ಕುದುರೆ ಪಂದ್ಯಗಳು, ಬೇಟೆ, ಈಜುವಿಕೆ, ಬಿಲ್ಗಾರಿಕೆ, ಸಂಗೀತ ಮತ್ತು ನಾಟ್ಯ ಇವು ಜನಪ್ರಿಯವಾಗಿದ್ದವು; ವಿದ್ಯೆಯ ಅಭಿವೃದ್ಧಿ ಮತ್ತು ಪ್ರಸಾರಣೆ, ತಕ್ಷಶಿಲಾ, ಉಜ್ಜಯಿನಿ, ವಾರಣಾಸಿ, ವಿಶ್ವವಿದ್ಯಾಲಯಗಳು, ಧರ್ಮಶಾಸ್ತ್ರ, ವ್ಯಾಕರಣ, ವೈದ್ಯಶಾಸ್ತ್ರ, ಛಂದಸ್ಸು, ಅರ್ಥ ಶಾಸ್ತ್ರ, ಗಣಿತ, ಇತ್ಯಾದಿಗಳ ಅಭ್ಯಾಸಕ್ಕೆ ಕೀರ್ತಿ ಪಡೆದಿದ್ದವು. ಸ್ತ್ರೀಶಿಕ್ಷಣ ಹರಡಿರಲಿಲ್ಲ. ಯಾಂತ್ರಿಕ ಶಿಕ್ಷಣವು ದೊರೆ ಯುತ್ತಿತ್ತು. ಯಂತ್ರತಜ್ಞರು, ಗಣಿ ಕೆಲಸಗಾರರು, ಲೋಹದ ಕೆಲಸಗಾರರು, ಗ್ರಂಥಗಳಲ್ಲಿ ಉಲ್ಲೇಖಿಸಲ್ಪಟ್ಟಿದ್ದಾರೆ. ಸ್ತ್ರೀ ಸ್ವಾತಂತ್ರ್ಯವಿತ್ತು: ಐಹಿಕ ಜೀವನದ ಹೆಚ್ಚಳವೇ ಪ್ರಧಾನ ವಾಗಿತ್ತು. ಆಧ್ಯಾತ್ಮಿಕ ಪ್ರವೃತ್ತಿಯೂ ಸಾಕಷ್ಟು ಆಚರಣೆ ಯಲ್ಲಿತ್ತು. ಸಂಸ್ಕೃತ ಭಾಷೆಯ ಪರಿಪೂರ್ಣತೆಗೆ, ಪಾಣಿನಿ, ಕಾತ್ಯಾಯನ, ಪತಂಜಲಿ, ಕೌಟಿಲ್ಯ ಇವರ ಬರವಣಿಗೆಗಳೇ ನಿದರ್ಶನಗಳಾಗಿವೆ. ಕಲೆಯ ಬೆಳವಣಿಗೆಯನ್ನು ಸಾಂಚಿ, ಸಾರನಾಥ, ಬಾರ್ ಹುತ್ ಮೊದಲಾದ ಸ್ಥಳಗಳಲ್ಲಿರುವ ಸ್ತೂಪ ಗಳಿಂದಲೂ ಮತ್ತು ಶಿಲ್ಪಗಳಿಂದಲೂ ತಿಳಿಯಬಹುದು.

*  *  *  *

೬. ಶುಂಗ ಮತ್ತು ಕಣ್ವರ ಕಾಲ (ಕ್ರಿ. ಪೂ. ೧೮೫–೨೭)

ಸಾಮಾಜಿಕ ಜೀವನದಲ್ಲಿ ಹೆಚ್ಚಿನ ಬದಲಾವಣೆಗಳು ಇರಲಿಲ್ಲ; ವೈದಿಕ ಧರ್ಮಾಚರಣೆ ಮತ್ತು ಯಜ್ಞಯಾಗಾದಿಗಳು ಆಚರಣೆಗೆ ಹೆಚ್ಚಿನ ಪ್ರಾಶಸ್ತ್ಯವಿತ್ತು.

## ೭. ಗುಪ್ತರ ಕಾಲ (ಕ್ರಿ. ಶ. ೩೨೦-೫೨೮)

ಮೌರ್ಯ ಸಾಮ್ರಾಜ್ಯವು ಅಳಿದ ಮೇಲೆ ಕೆಲವು ವರ್ಷಗಳ ನಂತರ ಕುಶಾನರೇ ಮೊದಲಾದ ಪರಕೀಯ ರಾಜ್ಯಗಳು ಸ್ಥಾಪನೆಯಾದವು; ಕ್ರಿ. ಶ. ೩೨೦ ರಲ್ಲಿ ಗುಪ್ತ ಸಾಮ್ರಾಜ್ಯವು ನಿರ್ಮಾಣವಾಯಿತು. ಗುಪ್ತ ಸಾಮ್ರಾಜ್ಯದ ರಾಜರು ರಾಜ್ಯವಿಸ್ತಾರ ಮಾಡಿದುದು; ಸಮುದ್ರ ಗುಪ್ತನ ರಾಜ್ಯವಿಸ್ತಾರ, ಮತ್ತು ದಕ್ಷಿಣ ದಂಡಯಾತ್ರೆ. ಚಂದ್ರಗುಪ್ತ ವಿಕ್ರಮಾದಿತ್ಯನು ಪರಕೀಯರನ್ನೋಡಿಸಿ ಮಾಳವ ದೇಶದ ವರೆಗೂ ರಾಜ್ಯ ವಿಸ್ತರಿಸಿ ಸಮುದ್ರ ವ್ಯಾಪಾರಕ್ಕೆ ಅನುಕೂಲವನ್ನುಂಟು ಮಾಡಿದನು. ಗುಪ್ತರ ಕಾಲವು ಭಾರತ ಇತಿಹಾಸದ ಸುವರ್ಣ ಯುಗವೆನ್ನಿಸಿತು -ಹಿಂದೂ ಧರ್ಮದ ಪುನರುಜ್ಜೀವನ; ವಿಷ್ಣು, ಶಿವ, ಲಕ್ಷ್ಮಿ, ಕುಮಾರ ಈ ದೇವತೆಗಳ ಆರಾಧನೆ, ಸಂಸ್ಕೃತ ಭಾಷೆಯ ಪ್ರಾಮುಖ್ಯತೆ, ಅಭಿವೃದ್ಧಿ ಪೂರ್ಣ ಮಟ್ಟದಲ್ಲಿತ್ತು. ಅಮರಸಿಂಹನ ಅಮರಕೋಶ, ವಿಷ್ಣುಶರ್ಮನ ಪಂಚತಂತ್ರ, ವಿಶಾಖದತ್ತನ ಮುದ್ರಾರಾಕ್ಷಸ, ಶೂದ್ರಕನ ಮೃಚ್ಛಕಟಿಕ, ಕಾಳಿದಾಸನ ನಾಟಕಗಳು, ಭಾರವಿಯ ಕೃತಿಗಳು, ಹದಿನೆಂಟು ಪುರಾಣಗಳ ರಚನೆ, —ಇವೇ ಮೊದಲಾದ ಪ್ರಸಿದ್ಧವಾದ ಗ್ರಂಥಗಳು ಬೆಳಕಿಗೆ ಬಂದವು; ಚೀಣೀ ಯಾತ್ರಿಕ ಫಾಹಿಯಾನನು ಎರಡನೇ ಚಂದ್ರಗುಪ್ತನ ಕಾಲದಲ್ಲಿ ಬಂದಿದ್ದು ತನ್ನ ಬರವಣಿಗೆಯಲ್ಲಿ ದೇಶದ ಸ್ಥಿತಿಗತಿಗಳನ್ನು ಚಿತ್ರಿಸಿದ್ದಾನೆ: ಹಿಂದೂ ಬೌದ್ಧ ಜೈನ ಮತಗಳು ಅಭಿವೃದ್ಧಿ ಸ್ಥಿತಿಯಲ್ಲಿದ್ದವು. ವ್ಯಾಪಾರ ಶ್ರೇಣಿ ಅಥವಾ ಸಂಘಗಳು ಪ್ರಬಲವಾಗಿದ್ದವು; ಸ್ತ್ರೀ

ಸ್ವಾತಂತ್ರ್ಯವಿರಲಿಲ್ಲ, ಅವರ ಸ್ಥಾನ ಮಾನಗಳು ಮೌರ್ಯರ ಕಾಲಕ್ಕಿಂತಲೂ ಕಡಿಮೆಯಿತ್ತು. ಚಿತ್ರಕಲೆ ಶಿಲ್ಪಕಲೆಯು ಉನ್ನತ ಮಟ್ಟದಲ್ಲಿತ್ತು—ಅಜಂತ ಮತ್ತು ಎಲ್ಲೋರ ಗುಹೆಗಳೇ ಇದಕ್ಕೆ ನಿದರ್ಶನ.

* * * *

## ೮. ಶ್ರೀ ಹರ್ಷನ ಕಾಲ (ಕ್ರಿ. ಶ. ೬೦೬–೬೪೮)

ಕ್ರಿ.ಶ. ೬೪೮ ರ ವರೆಗೆ ಏಕಚಕ್ರಾಧಿಪತ್ಯ; ಶ್ರೀ ಹರ್ಷನೇ ಪ್ರಸಿದ್ಧ ಹಿಂದೂ ರಾಜರುಗಳಲ್ಲಿ ಕಡೆಯವನು; ಪರಾಕ್ರಮ, ದಕ್ಷತೆಯಿಂದಲೂ ಸ್ವಯಂ ಮೇಲ್ವಿಚಾರಣೆಯಿಂದಲೂ ಕೂಡಿದ ರಾಜ್ಯ ವ್ಯವಸ್ಥೆ; ಸ್ವತಃ ಹರ್ಷನೇ ಸಾಹಿತಿ. ರತ್ನಾವಳಿ, ನಾಗಾನಂದ ಮತ್ತು ಪ್ರಿಯದರ್ಶಿಕಾ ನಾಟಕಗಳ ಕರ್ತೃ. ಪ್ರಸಿದ್ಧ ಕವಿ ಬಾಣನೂ ಹರ್ಷನ ಆಸ್ಥಾನದಲ್ಲಿದ್ದು ಹರ್ಷಚರಿತೆಯನ್ನು ಬರೆದಿರುವನು; ಚೀನಾ ದೇಶದ ಯಾತ್ರಿಕ ಹ್ಯೂಎನ್‌ತ್ಸಾಂಗನು ಭಾರತಕ್ಕೆ ಬಂದು ತನ್ನ ಅಮೂಲ್ಯವಾದ ಬರೆವಣಿಗೆಯನ್ನು ಬಿಟ್ಟು ಹೋಗಿರುವನು; ೭ನೆ ಶತಮಾನದ ಅಂತ್ಯದಲ್ಲಿ ಬೌದ್ಧ ಮತವು ಕ್ಷೀಣಿಸುತ್ತಾ ಬಂದು ವೈದಿಕಮತದ ಪುನರುಜ್ಜೀವನವು ಶ್ರೀ ಶಂಕರಾಚಾರ್ಯರಿಂದ ಮಾಡಲ್ಪಟ್ಟಿತು; ಒಳನಾಡಿನ ಸಮುದ್ರ ವ್ಯಾಪಾರಾಭಿವೃದ್ಧಿ; ವ್ಯಾಪಾರವನ್ನು ನಡೆಸುತ್ತಾ ಆಕಸ್ಮಿಕವಾಗಿ ನಡೆದ ಘಟನೆಯಿಂದ ಒಡೆದುಹೋದ ಹಡಗುಗಳಿಗೆ ಪರಿಹಾರ ದೊರೆಯುತ್ತಿತ್ತು; ಸಂಗೀತ ನಾಟ್ಯ ಕಲೆಗಳು ಅಭಿವೃದ್ಧಿ ಹೊಂದಿದ್ದವು; ರಾಜನು ಯುದ್ಧ ಅಥವಾ ಸಂಚಾರ

ಮುಗಿಸಿಕೊಂಡು ರಾಜಧಾನಿಗೆ ಹಿಂತಿರುಗುತ್ತಲೇ ಸ್ತ್ರೀಯರು ಬೆಲ್ಲವನ್ನು ತಲೆಯಮೇಲೆ ಚೆಲ್ಲುತ್ತಿದ್ದರು; ಬೇಟೆಯು ಪ್ರಿಯ ವಾದ ಆಟ; ಮನೆಯಲ್ಲಿ ಕಡ್ಡಿಗಳಿಂದ ಮಾಡಿದ ಕುರ್ಚಿಗಳ ಉಪಯೋಗವಿತ್ತು; ಪಲ್ಲಂಗ, ನಾರು ಅಥವಾ ಹುರಿಯಿಂದ ಬೆಂಚುಗಳು, ಬೊಂಬಿನಿಂದ ಮಾಡಿದ ಆಸನಗಳು, ಮಣೆಗಳು, ಬೆಳ್ಳಿ ಬಂಗಾರದ ತಾಟುಗಳು, ನೀರಿಡಲು ಪಾತ್ರೆಗಳು, ಪ್ರಿಯ ವಾದ ಪಕ್ಷಿಗಳ ಸಾಗಾಣಿಕೆ; ಕಲ್ಲು ಮರ ಮಣ್ಣಿನಿಂದ ಮನೆ ನಿರ್ಮಾಣ, ಸಾಲು ಸಾಲಾಗಿ ಮನೆಗಳನ್ನು ಕಟ್ಟುವುದು; ಮನೆ ಸಾಲುಗಳ ಮಧ್ಯೆ ಬೀದಿಗಳು. ಹಲವು ಜನರು ನೀರುಳ್ಳಿಯನ್ನು ಉಪಯೋಗಿಸುತ್ತಿರಲಿಲ್ಲ; ಸಾಮಾನ್ಯವಾಗಿ ಎಲ್ಲರಲ್ಲೂ ನಿತ್ಯ ಸ್ನಾನ, ಮಂತ್ರೋಚ್ಚಾರಣೆ, ಧರ್ಮವಿಧಿಗಳ ಪಾಲನೆ, ಊಟ ವಾದ ನಂತರ ಬಾಯಿ ತೊಳೆದುಕೊಳ್ಳುವುದು ಮೊದಲಾದ ಉತ್ತಮ ಪದ್ಧತಿಗಳಿದ್ದವೆಂದು ಇತ್ಸಿಂಗನು ಹೇಳಿರುವನು; ಪುರೋಹಿತ ವರ್ಗದವರು ಊಟಕ್ಕೆ ಮೊದಲು ಕೈಕಾಲು ತೊಳೆಯುತ್ತಿದ್ದರು; ಶ್ರಾದ್ಧ ಪದ್ಧತಿ ಆಚರಣೆಯಲ್ಲಿತ್ತು; ಜಾತಿಗಳಲ್ಲಿ ಭಿನ್ನತೆ ಉಂಟಾಗಿ ಹಲವಾರು ಜಾತಿಗಳು ಆಗಿದ್ದವು; ಆದರೆ ಆಚಾರ ವ್ಯವಹಾರಗಳು ಕ್ಷೀಣಿಸಿರಲಿಲ್ಲ. ಶಿಷ್ಯನು ಗುರು ವಿಗೆ, ಮಗನು ತಂದೆತಾಯಿಗೆ ನಮಸ್ಕಾರ ಮಾಡುವಿಕೆ, ಋಷಿಗಳು ಅರಸನಿಗೆ ಆಶೀರ್ವಾದ ಮಾಡುವುದು; ಕೀಳು ಜನರು ಶ್ರೇಷ್ಠರಿಗೆ ತಲೆಬಾಗುತ್ತಿದ್ದುದೂ, ಅತಿಥಿಗೆ ಸತ್ಕಾರ ದೊರೆಯುತ್ತಿದ್ದುದೂ, ನೀರು ನೀಡಿ ಆಸನ ಕೊಡುತ್ತಿದ್ದುದೂ, ದಾಸ್ಯವರ್ಗದವರೂ ಚಂಡಾಲರೂ ಊರ ಹೊರಗೆ ವಾಸಿಸು

ತ್ತಿದ್ದುದು ಸಾಮಾಜಿಕ ಜೀವನದ ಕೆಲವು ಮುಖ್ಯಾಂಶಗಳು; ಶ್ರೀ ಹರ್ಷನ ತರುವಾಯ ರಜಪುತ್ರರ ಕಾಲ.

* * *

## ೯. ದಕ್ಷಿಣ ಭಾರತ : (ಕ್ರಿ. ಪೂ. ೨ನೆ ಶತಮಾನದಿಂದ ಕ್ರಿ. ಶ. ೧೦ರ ವರೆಗೆ)

ಅನೇಕ ವರ್ಷಗಳ ವರೆಗೆ ದಕ್ಷಿಣ ಭಾರತ ವಿಂಧ್ಯ ಶ್ರೇಣಿಯಿಂದ ಉತ್ತರದೊಡನೆ ಪ್ರತ್ಯೇಕವಾಗಿತ್ತು; ಅಗಸ್ತ್ಯರು ವಿಂಧ್ಯಶ್ರೇಣಿಯನ್ನು ದಾಟಿದ ವರ್ಣನೆಯಿಂದ ಆಗಿನ ಕಾಲದ ಪ್ರಯಾಣದ ಕಷ್ಟಗಳೆಷ್ಟೆಂಬುದು ತಿಳಿಯುತ್ತದೆ; ಪ್ರಾಚೀನ ಕಾಲದಿಂದಲೂ ದಕ್ಷಿಣದಲ್ಲಿ ಜನರ ವಾಸ ಮತ್ತು ಉದಾತ್ತ ಸಂಸ್ಕೃತಿಯನ್ನು ಬೆಳೆಸಿಕೊಂಡರು; ಇವರು ದ್ರಾವಿಡರು; ಇವರ ಪದ್ಧತಿಗಳು ಆರ್ಯೇತರವಾಗಿದ್ದರೂ ಅವುಗಳ ವಿಚಾರವಾಗಿ ಅರಿವು ಹೆಚ್ಚಾಗಬೇಕು.

ಕ್ರಿ. ಪೂ. ೨೨೦ರ ವರೆಗೆ— ಆಂಧ್ರ ರಾಜ್ಯ ಸ್ಥಾಪನೆಯಾಗುವ ವರೆಗೆ— ದಕ್ಷಿಣಭಾರತದ ಇತಿಹಾಸ ಮಸಕು ಮಸಕಾಗಿದೆ; ತರುವಾಯ ದಕ್ಷಿಣ ಭಾರತದ ಕೀರ್ತಿ ಹೆಚ್ಚಿತು; ಪಶ್ಚಿಮ ಏಶ್ಯಾದೊಡನೆ ಸಮುದ್ರ ವ್ಯಾಪಾರ; ಅಲ್ಲಿ ಭಾರತ ಸಾಮುಗ್ರಿಗಳಿಗೆ ಹೆಸರು ಪಡೆದಿತ್ತು; ಅಕ್ಕಿಯು ರಫ್ತಾಗುತ್ತಿತ್ತು. ಗ್ರೀಕರು ಅಕ್ಕಿಗೆ ಓಜ಼ಾ ಎಂತಲೂ ತಮಿಳು ನಾಡಿನಲ್ಲಿ ಅರಿಸಿ ಎಂತಲೂ ಕರೆಯುತ್ತಿದ್ದರು; ಇತರ ಪದಾರ್ಥಗಳು-ಮುತ್ತು, ದಂತ, ಬಂಗಾರ, ಮೆಣಸು. ನವಿಲು— ಬೇಬಿಲಾನ್, ಈಜಿಪ್ಟ್,

ಗ್ರೀಸ್, ರೋಮ್ ದೇಶಗಳಿಗೆ ಹೋಗುತ್ತಿದ್ದವು; ಮಲಬಾರಿ ನಿಂದ ತೇಗದ ಮರವು ಚಾಲ್ಡಿಯಾ ಮತ್ತು ಬೇಬಿಲಾನ್ ದೇಶಗಳಿಗೆ ಹೋಗುತ್ತಿತ್ತು; ನಾನಾ ಭಾಗಗಳಿಂದ ವಣಿಕರು ದಕ್ಷಿಣಕ್ಕೆ ಬಂದು ಮೆಣಸು ಮತ್ತು ಬೆಲೆಬಾಳುವ ಹರಳುಗಳನ್ನು ಕೊಳ್ಳುತ್ತಿದ್ದರು. ಮೆಣಸಿಗೆ ಹೆಚ್ಚು ಬೆಲೆ ಇತ್ತು. ಈ ಪದಾರ್ಥ ಗಳಿಗೆ ರೋಮನ್‌ರು ಭಂಗಾರ ನಾಣ್ಯಗಳನ್ನು (aureus) ಕೊಡುತ್ತಿದ್ದರು; ರೋಮನ್ ಯೋಧರು ದಕ್ಷಿಣಕ್ಕೆ ಬಂದಿದ್ದರು.

ಹಡಗು ಕಟ್ಟುವಿಕೆಗೆ ಹೆಸರಾಗಿತ್ತು; ವಿಜಯನು ಭಾರತ ದಿಂದ ಸಿಲೋನಿಗೆ ಹಡಗಿನಲ್ಲಿ ಆನೆಗಳೊಂದಿಗೆ ಹೋಗಿದ್ದನು. ಅಂದಿನಿಂದ ಸಿಂಹಳದ್ವೀಪವೆಂಬ ಹೆಸರು ರೂಢಿಗೆ ಬಂತು. ಕ್ರಿ.ಶ.೧ನೆ ಶತಕದ ಆಂಧ್ರರಾಜ್ಯದ ನಾಣ್ಯಗಳ ಮೇಲೆ ಹಡಗಿನ ಮೇಲ್ಭಾಗ ( mast ) ಕಂಡು ಬರುತ್ತದೆ. ದಕ್ಷಿಣ ಭಾರತದ ಜನರು, ಮಲಯ, ಜಾವ, ಸುಮಾತ್ರ, ಕಾಂಬೋಡಿಯಾ ದ್ವೀಪಗಳಿಗೆ ವಲಸೆ ಹೋಗಿ ಭಾರತ ಸಂಸ್ಕೃತಿಯನ್ನು ಪ್ರಸಾರ ಮಾಡಿದರು. ಬರ್ಮಾ, ಸಯಾಂ, ಇಂಡೋ–ಚೀನಾಗಳಲ್ಲಿಯೂ ನೆಲೆಸಿದರು. ಈ ದೇಶಗಳಲ್ಲಿ ಬಿದ್ದುಹೋಗಿರುವ ದೊಡ್ಡ ದೊಡ್ಡ ನಗರಗಳಿವೆ; ಆರ್ಯ ಮತ್ತು ದ್ರಾವಿಡ ಸಂಸ್ಕೃತಿ ಪ್ರಸಾರ.

ಆಂಧ್ರರು, ಚಾಳುಕ್ಯರು, ರಾಷ್ಟ್ರಕೂಟರು, ಕದಂಬರು, ಹೊಯ್ಸಳರು, ಚೋಳ, ಪಲ್ಲವ, ಪಾಂಡ್ಯರು ದಕ್ಷಿಣದಲ್ಲಿ ರಾಜ್ಯ ಕಟ್ಟಿದರು. ರಾಜ್ಯ ರಾಜ್ಯಗಳಿಗೆ ಕಲಹವಾಗುತ್ತಿದ್ದರೂ ಸಾಮಾನ್ಯ ಜನರ ಜೀವನ ಮತ್ತು ಆಡಳಿತ ಪದ್ಧತಿ ಸಮರ್ಪಕ ವಿತ್ತು. -ಕಲೆ, ವಿದ್ಯೆಗೆ ಪ್ರಾಧಾನ್ಯತೆ; ತಂಜಾವೂರು, ಮಧುರೆ,

ಕಂಚಿ, ಮಹಾಬಲಿಪುರ, ಎಲಿಫೆಂಟಾ, ಬದಾಮಿ, ಪಟ್ಟದಕಲ್ಲು, ಐಹೊಳೆ, ಬೇಲೂರು, ಹಳೇಬೀಡು, ಸೋಮನಾಥಪುರ ಮೊದಲಾದ ಸ್ಥಳಗಳಲ್ಲಿ ಸುಂದರ ಹಾಗೂ ಭವ್ಯ ದೇವಾಲಯಗಳ ನಿರ್ಮಾಣ.

ದಕ್ಷಿಣ ಭಾರತವು ಪರಕೀಯರ ಆಕ್ರಮಣಕ್ಕೆ ತುತ್ತಾಗದೆ ಹಿಂದೂ ಸಂಸ್ಕೃತಿಯನ್ನು ರಕ್ಷಿಸಿಕೊಂಡು ಬಂದಿದೆ; ಜನರು ಸಂಪ್ರದಾಯ ಬದ್ಧರು; ಶೈವ, ವೈಷ್ಣವ, ಬೌದ್ಧ, ಜೈನ ಮತಗಳೆಲ್ಲವೂ ಹೊಂದಿಕೆಯಿಂದ ಅಭಿವೃದ್ಧಿ ಸ್ಥಿತಿಯಲ್ಲಿದ್ದವು; ಮತಸಹಿಷ್ಣುತೆ ಅಪಾರ; ಪೊಲೇಮಿಯ ವರ್ಣನೆ.

* * *

## ೧೦. ಕರ್ನಾಟಕ : (ಕ್ರಿ. ಪೂ. ೨ನೆ ಶತಮಾನದಿಂದ ಕ್ರಿ. ಶ. ೧೦ರ ವರೆಗೆ)

ಭಾರತ ದೇಶದಲ್ಲಿ ಕರ್ನಾಟಕವು ಪುರಾತನವಾದ, ವಿಸ್ತಾರವಾದ ಮತ್ತು ಕೀರ್ತಿ ಪಡೆದಿರುವ ಪ್ರದೇಶ. ರಾಜಕೀಯ ಕ್ಷೇತ್ರದಲ್ಲಿ ಹಲವಾರು ರಾಜ್ಯಗಳೇರ್ಪಟ್ಟಿದ್ದರೂ (ಶತವಾಹನ, ಕದಂಬ, ಗಂಗ ಇತ್ಯಾದಿ) ಆಡಳಿತ ಪದ್ಧತಿಯಲ್ಲಿಯೂ, ಸಾಮಾಜಿಕ ಜೀವನದಲ್ಲಿಯೂ ಆ ವೈವಿಧ್ಯತೆ ಇಲ್ಲ. ಹಿಂದೂ ಧರ್ಮವನ್ನು ರಕ್ಷಿಸಿ, ಆದರ್ಶಗಳನ್ನು ಪಾಲಿಸಿಕೊಂಡು ಬಂದ ಮಹಾ ಪುರುಷರ ನೆಲೆವೀಡು.

ಕರ್ನಾಟಕದ ಮೂಲನಿವಾಸಿಗಳು ಈಗಲೂ ಕೆಲವು ಭಾಗಗಳಲ್ಲಿ ವಾಸವಾಗಿದ್ದಾರೆ (ಆದಿವಾಸಿಗಳು). ಸಾಮಾಜಿಕ

ರೀತಿ, ಪದ್ಧತಿಗಳು ಆರ್ಯ ದ್ರಾವಿಡ ಆಧಾರವಾಗಿವೆ. ಚಾತು-ರ್ವರ್ಣ್ಯ ಪದ್ಧತಿ, ವೃತ್ತಿ ಭೇದಗಳಿಂದಾಗಿ ವರ್ಗೀಕರಣ, ಪಿತೃ ಪ್ರಧಾನ ಕುಟುಂಬ, ಕೆಲವು ಮೂಲನಿವಾಸಿಗಳಲ್ಲಿ ಸ್ತ್ರೀ ಪ್ರಧಾನ ಕುಟುಂಬಗಳು.

ಗ್ರಾಮವಾಸ ಪ್ರಧಾನ. ಗ್ರಾಮಗಳಲ್ಲಿ ಗ್ರಾಮಸಭೆಯ ಪ್ರಾಮುಖ್ಯತೆ. ವೃತ್ತಿ ಸಂಘಗಳ ರಚನೆ. ಸಾಂಸ್ಕೃತಿಕ ಕಾರ್ಯಗಳ ಕೇಂದ್ರಗಳಾಗಿದ್ದ ದೇವಾಲಯಗಳು ಮತ್ತು ಮಠಗಳಿಂದ ಧಾರ್ಮಿಕ ಪ್ರಸಾರಣೆ. ವಿದ್ಯಾ ಪ್ರಸಾರಣೆಯು ಪ್ರಾಕೃತ, ಸಂಸ್ಕೃತ ಮತ್ತು ಕನ್ನಡ ಭಾಷೆಗಳ ಮೂಲಕ. ವಿಶ್ವವಿದ್ಯಾಲಯಗಳಲ್ಲಿ ಧಾರ್ಮಿಕ, ರಾಜನೀತಿ, ಅರ್ಥಶಾಸ್ತ್ರ, ಭರತಶಾಸ್ತ್ರ, ಕಾಮಶಾಸ್ತ್ರ, ಸಂಗೀತಶಾಸ್ತ್ರ, ಕೃಷಿ ಕೈಗಾರಿಕಾ ಶಾಸ್ತ್ರಗಳ ಪ್ರಸಾರ, ಪಂಡಿತ–ಕವಿ ಸಮ್ಮೇಳನಗಳು, ಕನ್ನಡಿಗರ ಪ್ರಾಮಾಣಿಕತೆ, ನಿಷ್ಕಪಟತೆ, ನಿರ್ದುಷ್ಟವಾದ ಶೀಲ. ಮನೋವೈಶಾಲ್ಯ, ಔದಾರ್ಯ, ಕೆಚ್ಚು, ಧರ್ಮ ಸಹಿಷ್ಣುತೆ, ಸಂಸ್ಕಾರ ಪ್ರಿಯತೆ ಮೊದಲಾದುವು ಮುಖ್ಯಾಂಶಗಳು. ನಿಸರ್ಗ ಕೊಟ್ಟಿರುವ ಸಂಪತ್ತಿನಿಂದ ವ್ಯಾಪಾರ ಉದ್ಯೋಗ ಮಾಡುವವರು, ಉತ್ತಮ ಆರ್ಥಿಕ ಸ್ಥಿತಿ ಹೊಂದಿರುವವರು, "ಬಾಳಿ ಬದುಕಿದವರು-ಬದುಕಿ ಬಾಳಿದವರು."

ಆಧುನಿಕ ಭಾರತದಲ್ಲಿ ಕರ್ನಾಟಕದ ಪಾತ್ರ ಎಲ್ಲಾ ಕ್ಷೇತ್ರಗಳಲ್ಲಿಯೂ ಅತಿ ಪ್ರಮುಖವಾದುದು. ರಾಷ್ಟ್ರದ ಸರ್ವತೋಮುಖವಾದ ಬೆಳವಣಿಗೆಗೆ, ಸಂಸ್ಕೃತಿಯ ಬೆಳವಣಿಗೆಗೆ ರಾಷ್ಟ್ರದ ಏಕತೆ, ಐಕಮತ್ಯಕ್ಕೆ ಕನ್ನಡಿಗರು ಹುರುಪಿನಿಂದ,

ಸಾಹಸದಿಂದ, ತನು–ಮನ–ಧನ ಶಕ್ತಿಯಿಂದ ಹಾಗೂ ಬೌದ್ಧಿಕ ಬಲ ಆಧಾರಗಳಿಂದ ಶ್ರಮಿಸುತ್ತಿರುವರು. ಮತ್ತು ಭವ್ಯ ಭಾರತದ ಏಳಿಗೆ ಸಮೃದ್ಧಿಗೆ ಅಡಿಗಲ್ಲಿನಂತಿರುವರು.

---

“ ಧರ್ಮವೆಲ್ಲಿಹುದಲ್ಲಿ ಜಯ ಸ
ತ್ಕರ್ಮವೆಲ್ಲಿಹುದಲ್ಲಿ ಸಿರಿ ಸ
ದ್ಧರ್ಮ ಸಂರಕ್ಷಕರು ಹರಿ ಧೂರ್ಜಟಿ ಪಿತಾಮಹರು
ಧರ್ಮದೂರನು ನಿನ್ನವನು ಸ
ತ್ಕರ್ಮ ಬಾಹಿರನಾತ್ಮ ರಜಕ ವಿ
ಕರ್ಮ ದೋಷದಲಳಿದನಿನ್ನೇನೆಂದನಾ ಮುನಿಪ”

—ಕುಮಾರವ್ಯಾಸ ಭಾರ

೨೬. ಜೀವನದಲ್ಲಿ ನಗೆ ( ,, ) –ಎಂ. ಎಸ್. ಸುಂಕಾಪುರ
೨೭. ಬಸವಣ್ಣನವರ ಯೋಜನೆಗಳು ( ,, ) –ಬಿ. ಸಿ. ಜವಳಿ
೨೮. ೧೮೫೭ರ ಕ್ರಾಂತಿ ( ,, ) –ಸಿ. ವೀರಬಸಣ್ಣ
೨೯. ಕನ್ನಡ ಕಥಾಸೃಷ್ಟಿ –ಬಿ. ಬಿ. ಮಹೀಶವಾಡಿ
೩೦. ಸಂಸ್ಕೃತ ಸಾಹಿತ್ಯದಲ್ಲಿ ಶೃಂಗಾರರಸ –ಕೆ. ಕೃಷ್ಣಮೂರ್ತಿ
೩೧. ನೀರಾವರಿ ಬೇಸಾಯ –ಎಸ್. ಎ. ಹೊಸಮನಿ
೩೨. ಸಾರ್ವಜನಿಕ ಅಭಿಪ್ರಾಯ –ಎನ್. ರಾಜಗೋಪಾಲರಾವ್
೩೩. ಕನ್ನಡ ಕಾವ್ಯಗಳಲ್ಲಿ ಕಿರಾತಾರ್ಜುನ ಪ್ರಸಂಗ –ದೇವೇಂದ್ರಕುಮಾರ ಹಕಾರಿ
೩೪. ಕನ್ನಡಕ್ಕೆ ಪುರಂದರದಾಸರು ನೀಡಿದ ಕೊಡುಗೆ –ಜಿ. ಡಿ. ನಾಡಕರ್ಣಿ
೩೫. ಫ್ಯಾಶನ್ನುಗಳು (ದ್ವಿ. ಆ.) –ಕೆ. ಡಿ. ತಂಗೋಡ
೩೬. ಮಹಾಕವಿ ರಾಘವಾಂಕನ ಪಾತ್ರಗಳಲ್ಲಿ ತತ್ವನಿಷ್ಠೆ - ಬಿ. ವ್ಹಿ. ಮಲ್ಲಾಪುರ
೩೭. ಅಭಿವೃದ್ಧಿ ಯೋಜನೆಗಳಲ್ಲಿ ಸಹಕಾರದ ಪಾತ್ರ –ಎಸ್. ಜಿ. ಕರಭಂಟನಾಳ
೩೮. ಕನ್ನಡ ಜೈನ ಪುರಾಣಗಳು –ಎಸ್. ಎನ್. ನಾಯಕ
೩೯. ಕನ್ನಡ ನಾಟ್ಯಸೃಷ್ಟಿ –ಎಚ್. ಜಿ. ಲೋಕೂರ
೪೦. ಹರಿಹರನು ಚಿತ್ರಿಸಿದ ಶಿವಶರಣೆಯರು –ಬಿ. ಬಿ. ಹೆಂಡಿ
೪೧. ನೀವು ಬಯಸುವ ಮಗು ಗಂಡೊ? ಹೆಣ್ಣೊ? –ಕೆ. ಆರ್. ರಾಮಸ್ವಾಮಿ
೪೨. ಆಂಡಯ್ಯ –ಬಿ. ಎಸ್. ಕುಲಕರ್ಣಿ
೪೩. ಬೆಳವಲನಾಡಿನ ಬೆಳೆಗಳು –ಎಸ್. ಎ. ಹೊಸಮನಿ
೪೪. ಜಾನಪದ ಕಥೆಗಳು –ಎಲ್. ಆರ್. ಹೆಗಡೆ
೪೫. ಸುಧಾರಿಸಿದ ಬೇಸಾಯ –ಎ. ಸಿ. ಕಲ್ಯಾಣಿಮಠ
೪೬. ಕನ್ನಡನಾಡಿನ ಐತಿಹಾಸಿಕ ಮಹಾಪುರುಷರು –ಬಿ. ಆರ್. ಗೋಪಾಲ
೪೭. ಗ್ರಂಥಾಲಯದ ಅಂತರಂಗ –ಎಸ್. ಆರ್. ಗುಂಜಾಳ
೪೮. ಸ್ತ್ರೀ ಮತ್ತು ಶಿಕ್ಷಣ –ವನಮಾಲಾ ಆಚಾರ್
೪೯. ಜಾಗತಿಕ ಸರಕಾರ –ಸಿ. ವೀರಬಸಣ್ಣ
೫೦. ಸಮುದಾಯ ಸಂಘಟನೆ –ಎಚ್. ಎಂ. ಮರುಳಸಿದ್ಧಯ್ಯ

೫೧. ಅಶೋಕನ ಧರ್ಮಶಾಸನಗಳು —ಶ್ರೀನಿವಾಸ ರಿತ್ತಿ

೫೨. ಪ್ರಾಚೀನ ಭಾರತದ ರಾಜ್ಯಪದ್ಧತಿ (ದ್ವಿ. ಆ.)
—ಸಿ. ವ್ಹಿ. ರಂಗಸ್ವಾಮಿ

೫೩. ಅಕ್ಕಮಹಾದೇವಿ ಮತ್ತು ಮೀರಾಬಾಯಿ
—ಎಸ್. ಎಸ್. ಕಬ್ಬಿನ

೫೪. ಕನ್ನಡ ಕಾವ್ಯದಲ್ಲಿ ವೀರರಸ ನಿರೂಪಣೆ
—ಬಿ. ಬಿ. ಮಹೀಶವಾಡಿ

೫೫. ಹರಿಹರ ಮಹಾಕವಿಯ ಕೆಲವು ಮಹೋನ್ನತ ವಿಚಾರಗಳು
—ಬಿ. ಸಿ. ಜವಳಿ

೫೬. ಭಾರತ ರಾಜ್ಯಘಟನೆ —ಎಂ. ಎಸ್. ಪಾಟೀಲ

೫೭. ಪಂಚಾಯತಿ ರಾಜ್ಯ —ಎಸ್. ಜಿ. ಕರಭಂಟನಾಳ ಮತ್ತು
—ಕೆ. ಡಿ. ಬಸವ

೫೮. ವಿಷಮಜ್ವರ —ಪಿ. ಎಸ್. ಶಂಕರ

೫೯. ಪುಸ್ತಕ ಭಾಂಡಾರ ಕಾಯದೆ —ಜಿ. ಎಂ. ಪಾಟೀಲ

೬೦. ಸರ್ ಐಸಾಕ್ ನ್ಯೂಟನ್ —ಆರ್. ವ್ಹಿ. ಅಬ್ಬಿಗೇರಿ

೬೧. ಗ್ರಾಮಾಭ್ಯುದಯದ ಯೋಜನಾಂಗಗಳು —ಟಿ. ಕೆ. ಮೇಟಿ

೬೨. ಹರಿಜನರ ಸಮಸ್ಯೆಗಳು ಹಾಗು ಅವುಗಳ ಪರಿಹಾರ
—ಎನ್. ಕೆ. ಕಡೆತೋಟದ

೬೩. ರಾಸಾಯನಿಕ ಕಿಣ್ವಗಳು —ಎಂ. ಎಸ್. ಎಸ್. ರಾವ್

೬೪. ಪ್ರಜಾಪ್ರಭುತ್ವದ ಮೂಲತತ್ವಗಳು —ಕೆ. ಬಿ. ಬಕ್ಕಪ್ಪ

೬೫. ಹೃದಯಾಘಾತ — ಪಿ. ಎಸ್. ಶಂಕರ್

೬೬. ಆಭರಣಗಳ ಬಗೆಗೆ ಸಾಮಾಜಿಕ ದೃಷ್ಟಿಕೋನ —ಡಿ. ಎ. ಚಿಕ್ಕಿ

೬೭. ಶ್ರೀ ರಾಮಾಯಣ ದರ್ಶನದಲ್ಲಿ ಕುವೆಂಪು ಸೃಜಿಸಿದ
ಮೂರು ಪಾತ್ರಗಳು —ಎಂ. ಜಿ. ಬಿರಾದಾರ

೬೮. ಯೋಜನೆಗಳೇಕೆ ಬೇಕು ? —ಎಸ್. ಎಸ್. ಯಮ್ಮಿ

೬೯. ಸಗರನಾಡಿನ ಶಿವಶರಣರು —ವ್ಹಿ. ಶಿವಾನಂದ

೭೦. ವಿಜ್ಞಾನದ ದೃಷ್ಟಿಯಲ್ಲಿ ಸೃಷ್ಟಿ —ಆರ್. ಎಸ್. ಭೂಸನೂರಮಠ

೭೧. ವಿಜಯನಗರದ ನಿರ್ಣಾಯಕ ಯುದ್ಧ —ಎಸ್. ಬಿ. ಕೋಡದ

೭೨. ಬಸವಣ್ಣನವರನ್ನು ಕುರಿತ ಶಾಸನಗಳು—ಎಂ. ಎಂ. ಕಲಬುರ್ಗಿ

೭೩. ಆಧುನಿಕ ಭಾಷಾ ವಿಜ್ಞಾನ —ಜಿ. ಎಸ್. ಕುಳ್ಳಿ

ಬೆಲೆ ಪ್ರತಿ ಒಂದಕ್ಕೆ ೨೫ ಪೈಸೆ